


ಹಿಂದಿನ ಒಂದು ಕಾಲದಲ್ಲಿ ಕುಂಡಲಿನಿ ಎಂಬುದೊಂದು ದ್ವೀಪರಾಜ್ಯವು ತುಂಬಾ ಪ್ರಸಿದ್ಧವಾಗಿತ್ತು. ಚಿತ್ರಸೇನನೆಂಬವನು ಅಲ್ಲಿಯ ರಾಜನಾಗಿದ್ದನು. ಅವನು ರಾಜ್ಯಾಧಿಕಾರಕ್ಕೆ ಬಂದು ಎರಡು ವರ್ಷಗಳಾಗುವುದಕ್ಕೆ ಮೊದಲೇ ಪ್ರಜೆಗಳ ಒಳಿತನ್ನೇ ದೃಷ್ಟಿಯಲ್ಲಿಟ್ಟುಕೊಂಡು ಅನೇಕ ಯೋಜನೆಗಳನ್ನು ಹಾಕಿ ಅಮಲು ಪಡಿಸ ತೊಡಗಿದ್ದನು. ತನ್ನ ಪ್ರಜೆಗಳು ಯಾವ ಕೊರತೆಯೂ ಇಲ್ಲದೆ ಎಲ್ಲಾ ಸುಖ ಸೌಕರ್ಯಗಳಿಂದ ತೃಪ್ತರಾಗಬೇಕೆಂದೂ, ತನ್ನ ರಾಜ್ಯವು ರಾಮರಾಜ್ಯವಾಗಬೇಕೆಂದೂ ಆತನಿಗೆ ಮಹತ್ವಾಕಾಂಕ್ಷೆಯಿದ್ದಿತು. ಅಂತೆಯೇ ತುಂಬಾ ಕುತೂಹಲದಿಂದ, ಉತ್ಸಾಹದಿಂದ ಚಿತ್ರಸೇನ ಮಹಾರಾಜನು ಪ್ರಜೆಗಳ ಮೇಲೆ ಹಾಕಿದ ಎಲ್ಲಾ ತೆರಿಗೆಗಳನ್ನೂ ಅರ್ಧಕ್ಕರ್ಧ ಕಡಿಮೆ ಮಾಡಿದನು.

ಈ ಬಗೆಯ ರಾಜನ ಧರ್ಮ ಗುಣವನ್ನು ಪ್ರಜೆಗಳು ನೂರು ನಾಲಗೆಗಳಿಂದ ಹೊಗಳುತ್ತ ಸಂತೋಷ ಪಟ್ಟರು. ರಾಜ್ಯದಲ್ಲಿ ಎಲ್ಲಿ ನೋಡಿದರೂ ಚಿತ್ರಸೇನ ರಾಜನ ಧರ್ಮವನ್ನೂ ದಯೆಯನ್ನೂ ಹೊಗಳುವವರೇ ಕಂಡು ಬಂದರು. ಯಾವ ಮೂಲೆಗೆ ಹೋದರೂ ರಾಜನ ಗುಣಗಾನದ ಹಾಡುಗಳೇ.

ಇದೆಲ್ಲಾ ಸರಿಯೇ. ಧರ್ಮ ಗುಣಗಳುಳ್ಳ ರಾಜನ ಕೀರ್ತಿ ದಶದಿಶೆಗಳಲ್ಲಿ ಮೊಳಗುವ ವಿಷಯ ಎಲ್ಲರೂ ಸಂತೋಷಿಸ ತಕ್ಕದ್ದೇ. ಆದರೆ ಹಾಗೆ ರಾಜನ ಕೀರ್ತಿ ಮೊಳಗುತ್ತಿದ್ದ ರೀತಿಯಲ್ಲೇ, ರಾಜನ ಖಜಾನೆಯ ಘನತೆ ಕರಗುತ್ತಾ ಹೋಗುತಿತ್ತು. ಖಜಾನೆಯೊಳಗಿನ ಹಣವು ಖರ್ಚಿನ ಬಾಗಿಲಿನಲ್ಲಿ ಆದರ ಪಾಡಿಗೆ ಹರಿದು ಹೋಗುತ್ತಾ ಇದ್ದರೆ, ಬಂದು ಸೇರುವ ಬಾಗಿಲು ಸಪೂರವಾಗಿ ಹೋದರೆ ಖಜಾನೆ ತಳಗಾಣದೆ ಮತ್ತೇನಾದೀತು?

ಹೀಗೆ ಧನಾಗಾರವು ಬರಿದಾಗುತ್ತಾ ಬಂದಂತೆ ಪರಿಪಾಲನೆಯಲ್ಲಿ ತಾರುಮಾರು ಬರಲು ಪ್ರಾರಂಭವಾಯಿತು. ಅಧಿಕಾರಿಗಳಿಗೆ ಗಾಬರಿಯಾಯಿತು.

ಚಿತ್ರಸೇನನ ಪ್ರಧಾನ ಮಂತ್ರಿ ಬುದ್ಧಿ ಸೂಕ್ಷ್ಮತೆಯುಳ್ಳವನಾಗಿದ್ದನು. ಅವನು ರಾಜನ ಸಂಕಲ್ಪ



ವನ್ನೂ, ಮನೋಭಾವವನ್ನೂ ಗಮನಿಸಿಕೊಂಡೇ ಇದ್ದನು. ಅದರಿಂದ ಬರಲಿರುವ ಫಲಿತವೇನೆಂಬುದು ಕೂಡಾ ಅವನು ಮುಂದಾಗಿಯೇ ಅರಿತಿದ್ದನು. ರಾಜನು ಆಲೋಚನೆ ಕೇಳಿದರಷ್ಟೇ ಅವನು ತನ್ನ ಅಭಿಪ್ರಾಯ ತಿಳಿಸಬೇಕಿತ್ತು. ಹಾಗೆ ಅಲ್ಲಿನ ವಿಧಿಯಿದ್ದರೂ ಅವಕಾಶ ದೊರಕಿದಾಗೆಲ್ಲಾ ತನ್ನ ಅಭಿಪ್ರಾಯವನ್ನು ಸೂಚಕವಾಗಿ ತಿಳಿಸಿಯೂ ಇದ್ದನು. "ಅದೆಲ್ಲಾ ರಾಜಲಕ್ಷ್ಮಿ ನೋಡಿಕೊಳ್ಳುತ್ತಾಳೆ. ನನ್ನ ಕಾಲದಲ್ಲಿ ಪ್ರಜೆಗಳಿಗೆ ಶಾಶ್ವತವಾದ ಸಂತೋಷವಿರಲೇಬೇಕು. ಆ ಪುಣ್ಯವೇ ರಾಜ್ಯಕ್ಕೆ ಒಳ್ಳೇದು ಮಾಡುತ್ತದೆ. ಈವಿಷಯವಾಗಿ ಯಾರೂ ಗಾಬರಿಯಾಗಬೇಕಾಗಿಲ್ಲ. ಸುಮ್ಮನಿರಿ!" ಎಂದು ರಾಜನು ಮಂತ್ರಿಯ ಬಾಯಿಯನ್ನು ಮುಚ್ಚಿಸಿ ಬಿಡುತ್ತಿದ್ದನು.

ಅಂತೂ ಇಂತೂ ಖಜಾನೆ ಖಾಲಿಯಾಗುವ ಘಟ್ಟಕ್ಕೇ ಬಂದು ನಿಂತಿತು. ಇನ್ನು ಸುಮ್ಮನಿದ್ದರೆ ಮುಪ್ಪು ಬರುವುದೇ ಸರಿ ಎಂದುಕೊಂಡು ಮಂತ್ರಿ ಸಾಹಸದಿಂದ ಚಿತ್ರಸೇನನೊಂದಿಗೆ, "ಮಹಾರಾಜರೇ, ನಿಮ್ಮ ಶಾಸನಗಳೆಲ್ಲ ಪ್ರಜೆಗಳಿಗೆ ಸೌಖ್ಯವಾಗಿರುವುದು ನಿಜವೇ. ಇಲ್ಲಿ ನಮ್ಮ ಧನಾಗಾರವು ಬತ್ತಿ ಹೋಗುವ ಸ್ಥಿತಿಗೆ ಬಂದಿದೆ. ಧನವಿಲ್ಲದಿದ್ದರೆ ಯಾವ ಕೆಲಸವೂ ಸಾಧ್ಯವಾಗದಷ್ಟೆ? ಕಡೆಗೆ ಹೊಗಳುವ ಪ್ರಜೆಗಳೇ ದೂರುತ್ತಾರೆ. ಹೇಳಿದ ಮಾತನ್ನು ನಡೆಸಲಾರದ ಮೇಲೆ ನಾನು ಹೇಗೆ ನಿರ್ವಾಹದ ಸೂತ್ರ ಹಿಡಿಯಲಿ? ಆದುದರಿಂದ ನನ್ನನ್ನು ಈ ಬಾಧ್ಯತೆಯಿಂದ ತಪ್ಪಿಸಬೇಕೆಂದು ಪ್ರಭುಗಳನ್ನು ಕೇಳಿಕೊಳ್ಳುತ್ತೇನೆ" ಎಂದನು.

"ಅಷ್ಟೊಂದು ವಿಷಮಿಸಿ ಹೋಯಿತೇನು ಪರಿಸ್ಥಿತಿ?" ಎಂದು ರಾಜನು ಆಶ್ಚರ್ಯದಿಂದ ಪ್ರಶ್ನೆ ಮಾಡಿದನು.

"ಅದನ್ನೇನು ಹೇಳಲಿ ಮಹಾರಾಜರೇ, ಅತ್ತ ಉದ್ಯೋಗಸ್ಥರಿಗೂ, ಇತ್ತ ಸೈನಿಕರಿಗೂ ಪ್ರತಿ ತಿಂಗಳೂ ಸಂಬಳವನ್ನು ಕೊಡುತ್ತಾ ಇರಬೇಕು. ಇನ್ನು ಮುಂದಿನ ಸಂಬಳದ ದಿನಕ್ಕೆ ಒಂದು ವಾರವಿದೆ. ಇರುವ ಧನದ ಲೆಕ್ಕ ನೋಡಿದರೆ, ನೀರು ಹಾಕುವ ತೋಟಮಾಲಿಗಳಿಗೆ ಕೊಡುವ ಭತ್ಯಗಳಿಗೂ ಸಾಕಾಗಲಾರದೆಂದು ತೋರುತ್ತದೆ." ಎಂದನು ಮಂತ್ರಿ ಬಾಡಿದ ಮುಖದಿಂದ.

ಚಿತ್ರಸೇನ ಮಹಾರಾಜನು ಸ್ವಲ್ಪ ಆಲೋಚನೆ ಮಾಡಿ ತಲೆ ದೂಗಿ, "ಸರಿ. ನಾಳೆಯದಿನ ಸಾರ್ವಜನಿಕರ ಮಹಾ ದರ್ಬಾರಿಗೆ ಏರ್ಪಾಡು ಮಾಡಿರಿ. ಎಲ್ಲಾ ರಾಜೋದ್ಯೋಗಿಗಳೂ, ಪ್ರಜಾ ಪ್ರಮುಖರೂ ಸಭೆಗೆ ಬರಬೇಕೆಂದು ಡಂಗುರ ಹೊಡೆಸಿರಿ. ಮಹಾ ಸಭೆಯಲ್ಲಿ ಏನೋ ಒಂದು ಆಲೋಚನೆ ಬಾರದೆ ಹೋಗದು" ಎಂದನು.

"ಆಗಲಿ ಮಹಾಪ್ರಭು" ಎಂದು ಮಂತ್ರಿ ಅಲ್ಲಿಂದೆದ್ದು ಆಚೆಗೆ ಹೋದನು. ಮಹಾ ದರ್ಬಾರು ಏರ್ಪಡಿಸುವುದರಿಂದ ಏನು ಒಳಿತಾಗುವುದೆಂದು

ಮಂತ್ರಿಗೆ ಗೊತ್ತಾಗಲಿಲ್ಲ. ಹಾಗೆಯೇ ಕುಂಡಲಿನೀ ರಾಜ್ಯದೊಳಗೆಲ್ಲಾ ಡಂಗುರ ಸಾರಲಾಯಿತು. ಅದನ್ನು ಕೇಳಿದ ಪ್ರಜೆಗಳು, ಮಹಾದರ್ಬಾರು ಏತಕ್ಕೋ, ಏನು ವಿಶೇಷವೋ ಎಂದುಕೊಳ್ಳುತ್ತ, ಒಬ್ಬೊಬ್ಬರೂ ತಮ ತಮಗೆ ತೋರಿದಂತೆ ಮಾತಾಡ ತೊಡಗಿದರು. ರಾಜನು ಧರ್ಮಶೀಲನೆಂಬ ಸಂಗತಿ ಎಲ್ಲರಿಗೂ ಗೊತ್ತಿದ್ದುದೇ. ಆದುದರಿಂದ ಕೆಲವರು, "ಮತ್ತೇನಿಲ್ಲ, ಈಗ ಇರುವ ತೆರಿಗೆಗಳನ್ನು ಕೂಡಾ ತೆಗೆದು ಹಾಕಿ ಬಿಡುತ್ತಾರೆ. ನಮ್ಮ ಸಂತೋಷ ನೋಡಲಿಕ್ಕಾಯೇ ಸಭೆ ಕರೆಯುತ್ತಿದ್ದಾರೆ! ಮಹಾರಾಜನೆಂದರೆ ಇವನೇ ಸರಿ!" ಎಂದು ಹೇಳಿದರು. ಕ್ಷಣ ಮಾತ್ರದಲ್ಲಿ ಇದೇ ಒಂದು ಮುಖ್ಯ ವದಂತಿಯಾಗಿ ಹೋಯಿತು.

ಮರು ದಿನ ಮಹಾದರ್ಬಾರು ಮಂಟಪಕ್ಕೆ ಪ್ರಜೆಗಳು ಸಂತೋಷ ವಾಹಿನಿಯಲ್ಲಿ ತೇಲಿಕೊಂಡೇ ಬಂದು ಸೇರತೊಡಗಿದರು. ರಾಜೋದ್ಯೋಗಿಗಳೂ, ನಗರದೊಳಗಿನ ದೊಡ್ಡ ದೊಡ್ಡವರೂ ಬಂದು ಸಭಾಲಂಕಾರ ಮಾಡಿದರು. ಚಿತ್ರಸೇನ ರಾಜನು ಬಂದು ಸಿಂಹಾಸನದ ಮೇಲೆ ಮಂಡಿಸಿದನು. ಜಯಘೋಷವೆದ್ದು ಶಾಂತವಾದ ಮೇಲೆ, ರಾಜನ ಆಜ್ಞೆಯಂತೆ ಮುಖ್ಯಮಂತ್ರಿ ಸಭೆಯವರನ್ನು ನೋಡಿ, "ಮಹಾಸಭಾಸದರೆ! ಪ್ರಸ್ತುತ ಮುಖ್ಯ ವಿಷಯವೇನೆಂದರೆ, ನಮ್ಮ ರಾಜ್ಯದಲ್ಲಿ ಪೂರ್ವಿಕರಿಂದ ವಿಧಿಸಲ್ಪಟ್ಟು ಅಮಲಿನಲ್ಲಿದ್ದ ತೆರಿಗೆಗಳು ಹೆಸರಿಗೆ ಮಾತ್ರ ಈಗಲೂ ಇವೆ. ನಮ್ಮ ಮಹಾರಾಜರು ಕರುಣಾಮಯರೆಂದು ಖ್ಯಾತರಾಗಿದ್ದಾರೆ. ಇದು ನಿಮಗೆಲ್ಲಾ ಗೊತ್ತೇ ಇದೆ. ನಿಮಗೆ ಗೊತ್ತಾಗದಿರುವ ಸಂಗತಿಯೆಂದರೆ ನಾಮಮಾತ್ರವಾಗಿರುವ ಈ ಅಲ್ಪ ತೆರಿಗೆಯಿಂದ ಪ್ರಜಾಪಾಲನೆ ಹೇಗೆ ಸಾಧ್ಯವಾಗುತ್ತದೆಂಬುದೇ. ಅದೀಗ ನಮಗೂ ಒಂದು ತೀವ್ರ ಸಮಸ್ಯೆಯಾಗಿ ಕುಳಿತಿದೆ. ಅದಕ್ಕೊಂದು ಪರಿಹಾರ ಕಾಣಬೇಕಂತಲೇ ನಿಮ್ಮನ್ನೆಲ್ಲಾ ಕರೆಯಿಸಿ ಸಭೆ ಕೂಡಿಸ



ಲಾಗಿದೆ." ಎಂದು ಹೇಳಿ ಎಂಜಲು ನುಂಗುವ ನೆವನದಲ್ಲಿ ಮಾತು ನಿಲ್ಲಿಸಿ, ಕೆನೆದು ಗಂಟಲು ಸರಿಪಡಿಸಿಕೊಂಡನು.

ಆಗ ಸಭೆಯಲ್ಲೊಬ್ಬನು ಎದ್ದು ನಿಂತು, "ಅಂದರೆ ಪ್ರಜೆಗಳ ಮೇಲೆ ತೆರಿಗೆ ಹಾಕದಿದ್ದರೆ ರಾಜ್ಯಪಾಲನೆ ಮಾಡಲು ಸಾಧ್ಯವೇ ಆಗದೇನು?" ಎಂದು ಪ್ರಶ್ನಿಸಿದನು. ಅವನಿಗೆ ಇದು ಆಶ್ಚರ್ಯ ವಿಷಯವೆನಿಸಿತೋ ಏನೊ! ಅವನ ಪ್ರಶ್ನೆ ಕೇಳಿ ಸಭೆಯಲ್ಲಿದ್ದವರು ಅವನನ್ನು ವಿಚಿತ್ರವಾಗಿ ನೋಡಿದರು. ಮಹಾಮಂತ್ರಿ ಪ್ರಶ್ನಿಸಿದವನನ್ನು ತೀಕ್ಷ್ಣವಾಗಿ ನೋಡಿ, ಹುಬ್ಬುಗಂಟಿಕ್ಕಿ, "ಹೇಗೆ ಸಾಧ್ಯವಾದೀತು? ನೀವೇ ಆಲೋಚಿಸಿ ನೋಡಿರಿ. ನಮ್ಮ ರಾಜ್ಯದಲ್ಲಿರುವ ಜನಸಂಖ್ಯೆ ಎಷ್ಟು? ಅಷ್ಟು ಮಂದಿ ಸುಖವಾಗಿರಬೇಕಾದರೆ ಏನೇನು ಸೌಕರ್ಯಗಳಾಗಬೇಕು? ಇವರೆಲ್ಲರೂ ಆರೋಗ್ಯವಾಗಿರಬೇಕಾದರೆ ವೈದ್ಯರು ಬೇಡವೆ? ಔಷಧಗಳು ಬೇಡವೆ? ಚಿಕ್ಕಮಕ್ಕಳು




ಬೆಳೆದು ದೊಡ್ಡವರಾಗುವಾಗ ವಿದ್ಯೆಗಳು ಕಲಿಯಬೇಡವೇ? ನಡೆದಾಡಲು ಸಾರಿಗೆ ವ್ಯವಸ್ಥೆಗಳು ಆಗಬೇಡವೆ? ಇದೆಲ್ಲಾ ಒಂದು ಬದಿಗಿದ್ದರೆ ಪರರಾಜರು ಯಾವ ಕ್ಷಣದಲ್ಲಾದರೂ ನಮ್ಮ ಮೇಲೆ ದಾಳಿ ತೆಗೆದರೂ ತೆಗೆಯಬಹುದಷ್ಟೆ? ಅಂತಹ ದಾಳಿಗಳನ್ನು ನಿರೋಧಿಸಲಿಕ್ಕೆ ಸೈನ್ಯಗಳು ಸಿದ್ಧವಾಗಿರಬೇಡವೆ? ಅವರೆಲ್ಲರ ಬಲಕ್ಕೆ ತಕ್ಕ ಆಹಾರ ಬೇಡವೆ? ಆಯುಧಗಳು ಬೇಡವೇ? ಸಂಬಳ ಬೇಡವೇ? ಅದಕ್ಕೆಲ್ಲಾ ರಾಜಭಂಡಾರ ತುಂಬಿರ ಬೇಡವೇ? ತೆರಿಗೆಯ ಮೂಲಕ ಹಣಬಾರದಿದ್ದರೆ ಬೇರೆ ಯಾವ ರೀತಿಯಾಗಿ ಬರುತ್ತದೆ? ನೀವೇ ಹೇಳಿರಿ. ಮುಖ್ಯವಾಗಿ ತೆರಿಗೆಯೆಂದರೇನು? ಅವುಗಳನ್ನು ಏಕೆ ವಿಧಿಸುತ್ತಾರೆ? ಎಂಬುದು ಪ್ರತಿ ಪೌರನಿಗೂ ಗೊತ್ತಿರಬೇಕು. ಅದನ್ನು ತಿಳಿಯದುದರಿಂದಲೇ ಹಾಗೆ ಕೇಳಿದಿರಿ..." ಎಂದು ಹೇಳುತ್ತಿರಲು ಚಿತ್ರಸೇನ ರಾಜನು, ತಾನೇನೋ ಮಾತಾಡಲಿರುವಂತೆ ಸೂಚಿಸಿದುದನ್ನು ನೋಡಿ ಮಂತ್ರಿ ಬಾಯಿಮುಚ್ಚಿ ಬದಿಗೆ ಸರಿದು ಸುಮ್ಮನಾದನು.

"ನಮ್ಮ ಮಹಾ ಮಂತ್ರಿಗಳು ಯಥಾರ್ಥವಾದುದನ್ನೇ ಹೇಳಿದ್ದಾರೆ. ಆದರೆ ಒಂದು ಸಾರಿ ತಗ್ಗಿಸಿದ ತೆರಿಗೆಯನ್ನು ಮತ್ತೆ ವಿಧಿಸಿಬಿಟ್ಟರೆ, ಮೊದಲಿನ ಮನೋಭಾವದಲ್ಲಿ ಪ್ರಜೆಗಳು ಕೊಡಬಲ್ಲರೇ, ನಾವಾದರೂ ವಸೂಲು ಮಾಡಲು ಸಾಧ್ಯವೇ ಎಂಬುದೊಂದು ಪ್ರಶ್ನೆ ಪ್ರತ್ಯೇಕವಾಗಿ ಏಳುತ್ತದೆ" ಎಂದಷ್ಟೇ ಹೇಳಿದನು ರಾಜ.

ಸಭೆಯೊಳಗೆ ಏನೋ ಗುಸುಗುಸುಗಳು ಎದ್ದವು. ಯಾವನೋ ಒಬ್ಬನು ನಿರ್ಭಯದಿಂದ ಎದ್ದು ನಿಂತು, "ಮಹಾರಾಜರೇ, ಒಂದು ಸಾರಿ ತಗ್ಗಿಸಿದ ತೆರಿಗೆಗಳನ್ನು ಮತ್ತೆ ಹೆಚ್ಚಿಸುವ ವಿಷಯದಲ್ಲಿ ದುಡುಕಬಾರದೆಂದು ವಿಜ್ಞಾಪಿಸುತ್ತೇನೆ. ಇದು ಚೆನ್ನಾಗಿ ಯೋಚಿಸಬೇಕಾದ ವಿಷಯ. ಈಗಂತೂ ನಮ್ಮ ರಾಜ್ಯದಲ್ಲಿ ಮಾತ್ರವಲ್ಲದೆ ಪರರಾಜ್ಯಗಳಲ್ಲಿ ಕೂಡಾ ವ್ಯಾಪಿಸಿಕೊಂಡು ಹೋಗುವ ಪ್ರಭುಗಳ ಕೀರ್ತಿ, ಹೊಸ ತೆರಿಗೆಗಳನ್ನು ವಿಧಿಸಿಬಿಟ್ಟರೆ ಆರತಿ ಕರ್ಪೂರದ ಹಾಗೆ ಮಾಯವಾಗಿ ಹೋದೀತಲ್ಲ! ಮಹೀಪತಿಗಳು ಮಾತು ತಪ್ಪುವುದೆಂದರೆ ಸಾಮಾನ್ಯ ಸಂಗತಿಯಲ್ಲ!" ಎಂದನು.

ಈ ಎಚ್ಚರಿಕೆಯ ಮಾತು ರಾಜನಿಗೆ ಹೌದೆಂದೇ ತೋರಿತು. ತಾನು ಸಿಂಹಾಸನವೇರಿದಂದಿನಿಂದ ಈವರೆಗೂ ಆರ್ಜಿಸಿಕೊಂಡು ಬಂದಿರುವ ಯಶೋನಿಧಿ ಕ್ಷಣ ಮಾತ್ರದಲ್ಲಿ ಮಾಯವಾಗಿ ಹೋದೀತು! ಆದುದರಿಂದ ತಗ್ಗಿಸಿದ ತೆರಿಗೆಗಳನ್ನು ಎಷ್ಟು ಮಾತ್ರಕ್ಕೂ ಹೆಚ್ಚಿಸಬಾರದು. ಧನಾಗಾರವು ತುಂಬಿ ಬರಲು ಬೇರೇನಾದರೂ ದಾರಿಯಿದೆಯೋ ನೋಡಬೇಕು. ತೆರಿಗೆಯ ಮಾತೇ ಎತ್ತಬಾರದು. ಈ ಮಹಾ ಸಭೆಯಲ್ಲಿ ಅಂತಹ ಉಪಾಯ ಸೂಚಿಸಬಲ್ಲ ಮೇಧಾವಿ ಯಾವನೂ ಇರಲಾರನೆ!



ಹೀಗೆಂದುಕೊಂಡು ಚಿತ್ರಸೇನ ರಾಜನು, "ತೆರಿಗೆ ವಿಷಯದಲ್ಲಿ ಒಂದುಸಾರಿ ಮಾಡಿದ ನಿರ್ಣಯವನ್ನು ಬದಲಾಯಿಸುವ ಯೋಚನೆ ನಮಗಿಲ್ಲ. ಅದಲ್ಲದೆ ಹೊಸ ತೆರಿಗೆ ಹಾಕುವುದೆಂಬ ಮಾತಿಗೂ ಎಡೆ ಕೊಡಲಾರೆನು. ಇದಂತೂ ನಿಶ್ಚಯ! ಆದರೆ ಮಹಾಮಂತ್ರಿಯವರು ಪ್ರಸ್ತುತ ಪರಿಸ್ಥಿತಿಯನ್ನು ವಿವರಿಸಿದ್ದಾರೆ. ಆ ವಿಷಯದಲ್ಲಿ ಏನು ಮಾಡಿದರೆ ಚೆನ್ನಾಗಿರುತ್ತದೆಂದು ಸಭಿಕರಾದ ನೀವೇ ಆಲೋಚನೆ ಮಾಡಿ ಹೇಳಿರಿ!" ಎಂದನು.

ಇಡೀ ಸಭೆಯೇ ನಿಶ್ಶಬ್ದವಾಯಿತು. ಎಲ್ಲರೂ ಮುಖ ಮುಖ ನೋಡಿಕೊಳ್ಳುತ್ತಿದ್ದರೇ ಹೊರತು ಏನು ಉತ್ತರ ಕೊಡಬೇಕೆಂದು ಯಾರಿಗೂ ತೋರಲಿಲ್ಲ. ಎರಡು ನಿಮಿಷಗಳು ಹೀಗೆ ಕಳೆದ ಮೇಲೆ, ಬಲಿಷ್ಠನಾದೊಬ್ಬನು ಎದ್ದು ನಿಂತನು. ಸೇನಾಧಿಪತಿಯಾದ ಸಮರ ಸೇನನೇ ಅವನು. "ಮಹಾರಾಜರೇ, ಧನಾಗಾರವನ್ನು ತುಂಬಿಸುವ ವಿಷಯ ಅಂತಹ ದೊಡ್ಡ ಸಮಸ್ಯೆಯಾಗಿ ನನಗೆ ತೋರುವುದಿಲ್ಲ. ಅದಕ್ಕೆ ವೀರೋಚಿತವೂ, ರಾಜಧರ್ಮಕ್ಕೆ ಸಮ್ಮತವೂ, ಸುಲಭವೂ ಆದ ಉಪಾಯವನ್ನು ನಾನು ತಿಳಿಸಬಲ್ಲೆನು. ಆದರೆ ಅದು ಬಹಳ ಗುಪ್ತ ವಿಷಯವಾದುದರಿಂದ ಈ ಸಾರ್ವಜನಿಕ ಸಭೆಯಲ್ಲಿ ಹೇಳುವುದು ಉಚಿತವಲ್ಲವೆಂದು ಭಾವಿಸುತ್ತೇನೆ. ಅಪ್ಪಣೆಯಾದರೆ ತಮ್ಮೊಂದಿಗೆ ಏಕಾಂತದಲ್ಲಿ ನನ್ನ ಆಲೋಚನೆಯನ್ನು ವಿಜ್ಞಾಪಿಸಿಕೊಳ್ಳುತ್ತೇನೆ" ಎಂದನು ಸೇನಾಧಿಪತಿ. ಇದಕ್ಕೆ ಒಪ್ಪಿಕೊಂಡವರಂತೆ, ಸೇನಾಧಿಪತಿಯಿಂದ ತಮ್ಮ ಭಾರ ನೀಗಿತೆಂಬ ಸಂತಸದಲ್ಲಿ ಸಭೆಯವರೆಲ್ಲಾ ಕರತಾಲ ಧ್ವನಿಯೆಬ್ಬಿಸಿದರು. ಆ ಮೇಲೆ ಚಿತ್ರಸೇನ ರಾಜನು ಸಭೆಯನ್ನು ಸಾಕು ಮಾಡಿ ಎದ್ದನು. ಸಭೆ ಚೆದರಿ ಎಲ್ಲರೂ ಹೊರಟು ಹೋದರು.

ಆ ದಿನ ರಾತ್ರಿ ಹತ್ತು ಗಂಟೆಯ ಹೊತ್ತಿನಲ್ಲಿ ಚಿತ್ರಸೇನ ರಾಜನು ಸಮರಸೇನನನ್ನು ಉದ್ಯಾನ ವನಕ್ಕೆ ಕರೆಯಿಸಿದನು. ಅಲ್ಲಿ ಸಮರಸೇನನು ಮಹಾರಾಜನೊಂದಿಗೆ, "ಪ್ರಭುಗಳೇ, ನಮ್ಮ ಧನಾಗಾರದ ವಿಷಯದಲ್ಲಿ ಅಷ್ಟೆಲ್ಲಾ ಯೋಚಿಸಬೇಕಾದ ಅಗತ್ಯವಿಲ್ಲ. ಅದಕ್ಕಾಗಿ ನಮ್ಮ ರಾಜ್ಯದೊಳಗಂತೂ ಒಂದು ಚಿಕ್ಕಾಸುಕೂಡಾ ಹುಟ್ಟುವ ಹಾಗಿಲ್ಲ. ಹಾಗಾದರೆ ಬೇರೆ ದಾರಿ? ರಾಜ್ಯವು ರಾಮರಾಜ್ಯವಾಗಿ ಪ್ರಜೆಗಳು ಹೇಗೆ ಶಾಶ್ವತ ಸುಖವನ್ನು ಹೊಂದಬಲ್ಲರು? ಇದು ತಾನೇ ತಮ್ಮ ಸಮಸ್ಯೆ? ಇದಕ್ಕಾಗಿ ನನಗೆ ಕಾಣುವ ಒಂದೇ ಒಂದು ಮಾರ್ಗ ಯಾವುದೆಂದರೆ, ನಾವು ಪರರಾಜ್ಯಗಳ ಮೇಲೆ ದಾಳಿಮಾಡಿ ಅಲ್ಲಿಯ ಧನಾಗಾರಗಳನ್ನು ದೋಚಿಕೊಂಡು ಬರಬೇಕು. ಈ ಪದ್ಧತಿ ರಾಜ ಧರ್ಮಗಳಲ್ಲಿ ಒಂದು ತಾನೇ? ಈ ಬಗೆಯ ಅಗತ್ಯಗಳಿಗಾಗಿಯೇ ಸೇನಾಧಿಪತಿಗಳನ್ನೂ ಸೇನೆಗಳನ್ನೂ ರಾಜರು ಪೋಷಿಸುತ್ತಾರೆ. ಇದರಲ್ಲಿ ಯಾವ ತಪ್ಪೂ ಇಲ್ಲವೆಂಬುದು ನನ್ನ ಅಭಿಪ್ರಾಯ" ಎಂದು ಬಿನ್ನವಿಸಿಕೊಂಡನು.



ಚಿತ್ರಸೇನನು ಸ್ವಲ್ಪಹೊತ್ತು ಆಲೋಚನೆ ಮಾಡಿ, "ಅದು ಸರಿಯೇ ! ನಿನ್ನ ಆಲೋಚನೆ ಚೆನ್ನಾಗಿಯೇ ಇದೆ. ಆದರೆ ಇದರಲ್ಲಿರುವ ತೊಂದರೆಯನ್ನು ನೀನು ಗಮನಿಸಿದಂತೆ ಕಾಣುವುದಿಲ್ಲ. ಅಸಲು ನಮ್ಮ ಕುಂಡಲಿನಿ ರಾಜ್ಯವೆಂಬುದು ದ್ವೀಪರಾಜ್ಯತಾನೆ ? ನಮಗೆ ನಾಲ್ಕು ದಿಕ್ಕುಗಳಲ್ಲಿಯೂ ಸಮುದ್ರವೇ ಇದೆ. ಈ ಸಮುದ್ರಗಳನ್ನೆಲ್ಲ ದಾಟಿಕೊಂಡು ಹೋಗಿ, ನೆರೆ ರಾಜ್ಯಗಳ ಮೇಲೆ ದಾಳಿ ಮಾಡಬೇಕಾದರೆ ನಮಗೆ ತುಂಬಾ ನೌಕೆಗಳೂ, ಸೈನಿಕರೂ ಬೇಕಾಗುತ್ತದೆ. ಈ ವಿಷಯವನ್ನು ನೀನು ಮರೆತಹಾಗಿದೆ" ಎಂದನು.

"ಆ ನೌಕಾಬಲ ಸೈನಿಕ ಬಲಗಳ ವಿಷಯ ಆಲೋಚಿಸಿದ್ದೇನೆ. ಆ ಸಂಗತಿಯನ್ನು ನನಗೇ ಬಿಟ್ಟು ಬಿಡಿ" ಎಂದನು ಸೇನಾಧಿಪತಿ ಸಮರಸೇನ. "ಭೇಷ್ ! ಹಾಗಾಗಾದರೆ ಸರಿ. ಆ ಬಾಧ್ಯತೆ ಪೂರಾ ನಿನ್ನದೇ. ನಮ್ಮ ಸೈನಿಕರನ್ನು ಹೆಚ್ಚಿಸಲು . ಎಷ್ಟೋ ಮಂದಿ ಹೊಸಬರನ್ನು ಸೈನ್ಯದಲ್ಲಿ ಸೇರಿಸಿಕೊಳ್ಳಬೇಕಾಗುತ್ತದೆ, ಅದಕ್ಕೆ ನಿನಗೆ ರಾಜಾಜ್ಞೆ ಬೇಕಷ್ಟೆ? ಇಕೋ, ಈ ಮುದ್ರಿಕೆಯನ್ನು ಉಪಯೋಗಿಸಿಕೊಂಡು ಕಾರ್ಯ ಸಾಧಿಸು" ಎಂದು ರಾಜನು ತನ್ನ ಬೆರಳಲ್ಲಿದ್ದ ರಾಜ ಮುದ್ರಿಕೆಯನ್ನು ತೆಗೆದು ಸೇನಾನಾಯಕನಿಗೆ ಕೊಟ್ಟನು. ಆಗ ರಾಜನಿಗೆ ದೊಡ್ಡದೊಂದು ಭಾರ ವನ್ನು ಕೆಳಗಿಳಿಸಿದಷ್ಟು ನೆಮ್ಮದಿಯುಂಟಾಗಿತ್ತು.

ಸೇನಾನಾಯಕ ಸಮರಸೇನನು ರಾಜನ ಬಳಿ ಯಿಂದ ಅಪ್ಪಣೆಪಡೆದುಕೊಂಡು ಹೋಗಿ, ಸೈನ್ಯದ ಎಲ್ಲಾ ದಳನಾಯಕರನ್ನೂ ಸಮಾವೇಶಗೊಳಿಸಿ, ಅವ ರೊಂದಿಗೆ, ರಾಜನಿಗೂ ತನಗೂ ಆದ ಸಂಭಾಷಣೆ ಗಳನ್ನು ವಿವರಿಸಿದನು. ಕಡೆಗೆ "ಇದೆಲ್ಲಾ ಚೆ[illegible]ಸಿ. ಒಂದೇ ಒಂದು ಸಂದೇಹ ನನ್ನನ್ನು ಬಾಧಿಸುತ್ತಿದೆ" ಎಂದನು ಸಮರಸೇನ.

ಅದೇನು ಸಂದೇಹವೆಂದು ದಳನಾಯಕರು ಕೇಳಲು, "ಅದು ಕೂಡಾ ಮುಖ್ಯವಾದುದೇ. ನಾವು ನಮ್ಮ ಸೈನಿಕರನ್ನೆಲ್ಲಾ ಕರೆದುಕೊಂಡು ಸುತ್ತು ಮುತ್ತಲಿನ ದ್ವೀಪರಾಜ್ಯಗಳ ಮೇಲೆ ದಂಡಯಾತ್ರೆ ಹೋಗುತ್ತೇವೆ. ನಮ್ಮ ಉದ್ದೇಶ ಅಲ್ಲಿಯ ಧನಾಗಾರ ಗಳನ್ನು ಕೊಳ್ಳೆಹೊಡೆಯುವುದು ಮಾತ್ರವೇ. ನಾವೇನೂ ಆ ದ್ವೀಪರಾಜ್ಯಗಳನ್ನು ಆಕ್ರಮಿಸಿ ಆಳಿಕೆ ನಡೆಯಿಸಲು ಹೋಗುವುದಿಲ್ಲ. ಇಷ್ಟೊಂದು ಸಣ್ಣ ಕೆಲಸಕ್ಕೆ ಈಗ ನಮಗಿರುವ ಸೈನಿಕರೇ ಸಾಕೆಂದು ತೋರುತ್ತದೆ. ಆದರೆ ನಾವು ಇಲ್ಲಿರುವ ಎಲ್ಲಾ ಸೇನೆ ಯನ್ನೂ ಸಾಗಿಸಿಕೊಂಡು ಹೋಗಿಬಿಟ್ಟರೆ, ಅವಕಾಶ ವನ್ನು ಹೊಂಚುಹಾಕಿಕೊಂಡಿರುವ ದ್ರೋಹಿಗಳಾ ರಾದರೂ ಪ್ರಜೆಗಳನ್ನು ಕೆರಳಿಸಿ ತಿರುಗಿ ಬೀಳುವಂತಹ ಬಂಡಾಯವೇನಾದರೂ ಎಬ್ಬಿಸಬಹುದು. ಆಗ ನಮ್ಮ ಮಹಾರಾಜರನ್ನೂ, ರಾಜ ಕುಟುಂಬವನ್ನೂ ರಕ್ಷಿಸುವವರು ಯಾರು? ಇದೊಂದು ಮುಖ್ಯ ಪ್ರಶೆಯಲ್ಲವೆ?" ಎಂದನು ಸೇನಾಧಿಪತಿ. "ಹೌದು ಇದೊಂದು ಸಿಕ್ಕು ಸಮಸ್ಯೆಯೇ ನಿಜ. ಸೈನ್ಯವಿಲ್ಲದ

ರಾಜನು ಸುಟ್ಟ ಕಡ್ಡಿಗೆ ಸಮ ಅನ್ನುತ್ತಾರೆ." ಎಂದನೊಬ್ಬ ದಳನಾಯಕ.

ಸೇನಾನಿ ಸಮರಸೇನನು ಏನೋ ಹೇಳಲು ನೋಡುವಾಗ, ಒಬ್ಬ ಮುದುಕ ಯೋಧನು ದೊಡ್ಡ ಕಂಠದಿಂದ, "ಸೇನಾಧಿಪತಿಯೇ ! ಕುಂಡಲಿನೀ ದೇವಿಯ ಕರುಣೆಯಿಂದ ನನಗೊಂದು ಒಳ್ಳೆಯ ಆಲೋಚನೆ ಹೊಳೆಯುತ್ತದೆ. ಹೇಳಲೆ? " ಎಂದನು.

"ಹೇಳಯ್ಯಾ !" ಎಂದರು ಎಲ್ಲರೂ ಒಮ್ಮೆಗೇ.

"ಕೇಳಿರಿ ಹಾಗಾದರೆ. ದೇಶದಲ್ಲಿ ಬಂಡಾಯದಂತಹುದೇನಾದರೂ ಕೆರಳಿ ಏಳಬೇಕಾದರೆ ಅದಕ್ಕೆಲ್ಲಾ ಕಾರಣರು ಯುವಕರೇ. ಆದುದರಿಂದ ನಾವು ದೇಶದೊಳಗಿನ ಯುವಕರನ್ನೆಲ್ಲಾ ಯಾವುದೋ ಒಂದು ವಿಧದಲ್ಲಿ ಆಕರ್ಷಿಸಿ ಸೈನ್ಯದಲ್ಲಿ ಸೇರಿಸಿಕೊಂಡುಬಿಡಬೇಕು. ಇದೇ ಉತ್ತಮ ಮಾರ್ಗವಾಗಿದೆ." ಎಂದನು ವೃದ್ಧಯೋಧ.




ಈ ಉಪಾಯವು ಸಮರಸೇನನಿಗೂ, ಅಲ್ಲಿ ಸೇರಿದ ಇತರರಿಗೂ ಚೆನ್ನಾಗಿ ಹಿಡಿಸಿತು. ಆಗಲೇ ಚರ್ಚಿಸಿ ಅದಕ್ಕೆ ತಕ್ಕ ಪಥಕವನ್ನು ಹಾಕಿಕೊಂಡರು. ರಾಜ್ಯದೊಳಗೆ ಹದಿನೈದರಿಂದ ನಲುವತ್ತು ವಯಸ್ಸಿನವರೆಗೆ ಇರುವ ಮಧ್ಯಮ ವಯಸ್ಸಿನವರೆಲ್ಲಾ ಸೈನ್ಯದಲ್ಲಿ ಸೇರತಕ್ಕದ್ದೆಂದು ರಾಜಾಜ್ಞೆಯನ್ನು, ರಾಜ ಮುದ್ರಿಕೆಯ ಸಹಾಯದಿಂದ ಎಲ್ಲಾ ಪ್ರಜೆಗಳಿಗೂ ಸಿಗುವ ಹಾಗೆ ಹೊರಡಿಸಲಾಯಿತು.

ಮರುದಿನವೇ ಸೈನಿಕರು ಆಜ್ಞಾ ಪತ್ರಗಳನ್ನು ತೆಗೆದುಕೊಂಡು ಪ್ರತಿ ಗ್ರಾಮಕ್ಕೂ ಹೋಗಿ, ಅಲ್ಲಲ್ಲಿ ಪ್ರಾಯ ತುಂಬಿದ್ದವರನ್ನು ಸೈನ್ಯದಲ್ಲಿ ಸೇರಿಸಿಕೊಳ್ಳುವ ಕಾರ್ಯದಲ್ಲಿ ತೊಡಗಿದರು. ಆಗ ಕೆಲವರು ಸೈನ್ಯದಲ್ಲಿ ಸೇರಲು ತಮ್ಮ ಅಸಮ್ಮತಿಯನ್ನು ವ್ಯಕ್ತಪಡಿಸುತ್ತ, "ಅಯ್ಯಾ, ಬೇಕಾದರೆ ರಾಜರ ಹತ್ತಿರ ಹೊಸ ತೆರಿಗೆ ಹಾಕಲು ಹೇಳಿರಿ. ಸಂತೋಷವಾಗಿ ಕೊಡುತ್ತೇವೆ. ಅಷ್ಟೇ ಹೊರತು ಯಾವುದೋ ಪರದೇಶಗಳ ಮೇಲೆ ದಾಳಿಗಾಗಿ ನಮ್ಮನ್ನು ಒತ್ತಾಯಿಸಿ ಸೈನ್ಯದಲ್ಲಿ ಸೇರಿಸಿಕೊಳ್ಳಬಾರದು, ತಂದೆ ತಾಯಿಗಳಿಂದಲೂ, ಹೆಂಡತಿ ಮಕ್ಕಳಿಂದಲೂ ನಮ್ಮನ್ನು ಬೇರ್ಪಡಿಸಬೇಡಿರಯ್ಯಾ !" ಎಂದು ದೈನ್ಯತೆಯಿಂದ ಮೊರೆಯಿಟ್ಟುಕೊಂಡರು.

ಆಜ್ಞಾ ಪತ್ರಗಳನ್ನು ಅಂಥವರ ಮುಖಕ್ಕೆ ಹಿಡಿದು ಸೈನಿಕರು, "ಇದು ರಾಜಾಜ್ಞೆ, ನೋಡಿದಿರಾ ?" ಎನ್ನುತ್ತ ಸಂತೋಷದಿಂದ ಸೇರುವವರನ್ನು ಮರ್ಯಾದೆಯಿಂದಲೂ, ಉಳಿದವರನ್ನು ಬಲವಂತದಿಂದ ಕೈ ಕಾಲು ಕಟ್ಟಿ ಡೋಲಿಗಳಲ್ಲಿ ಹೊತ್ತುಕೊಂಡೂ ನಗರಕ್ಕೆ ಒಯ್ದರು.

ಈ ಬಗೆಯ ಬಲವಂತದ ಸೈನಿಕ ಕೆಲಸದ ಮೇಲೆ ಇಷ್ಟವಿಲ್ಲದವರು ಕೆಲವರು, ಸೈನಿಕರ ಕಣ್ಣಿಗೆ ಬೀಳದೆ ತಪ್ಪಿಸಿಕೊಂಡು ಹೋಗಿ, ಚಿತ್ರಸೇನರಾಜನೊಂದಿಗೆ ಇದು ಸರಿಯಲ್ಲವೆಂದು ಮೊರೆಯಿಟ್ಟುಕೊಂಡರು. ಚಿತ್ರಸೇನರಾಜನು ಅವರು ಹೇಳುವುದನ್ನೆಲ್ಲಾ ನೆಮ್ಮದಿ

ಯಾಗಿ ಕೇಳಿ. "ನಿಮ್ಮಲ್ಲಿ ಕೆಲವರು ನನ್ನ ಕೀರ್ತಿಯನ್ನು ಸಾವಿರ ಬಾಯಿಗಳಿಂದ ಹೊಗಳುವಿರಿ. ಕಾವ್ಯ ಹೆಣೆಯುವಿರಿ. ಹಾಗಿರುವಾಗ ನಾನು ತೆರಿಗೆಗಳನ್ನು ಏರಿಸಿ ಬಿಟ್ಟರೆ ನೀವೆಲ್ಲಾ ನನ್ನ ಮೇಲೆ ಬೈಗುಳು ಪದ್ಯಗಳನ್ನು ಹಾಡುವವರಾಗುವಿರಿ. ಅಂದರೆ ನಾನೇ ನಿಮಗೆ ಅದಕ್ಕೂ ಎಡೆಮಾಡಿಕೊಟ್ಟವನಾಗುತ್ತೇನೆ. ಹೇಳಿದ ಮಾತನ್ನು ನಡೆಸುವುದೇ ನಮ್ಮ ವಂಶಾಚಾರ! ತೆರಿಗೆ ತಗ್ಗಿಸುವುದಾಗಿ ಹೇಳಿ ಹಾಗೇ ಮಾಡಿದೆ: ಈಗ ದಾಳಿ ತೆಗೆದು ದೋಚಬೇಕೆಂದು ಹೇಳಿದೆ. ಹಾಗೆಯೇ ಮಾಡುವೆನು. ಪ್ರಜೆಗಳಾದ ನೀವೂ ಅದಕ್ಕೆ ಒಳಪಡಲೇಬೇಕು" ಎಂದನು.

ಅಂತೂ ಸೈನಿಕರ ಶೇಖರಣೆ ಬೇಗದಲ್ಲೇ ಮುಗಿಯಿತು ಒಂದು ಶುಭ ಮುಹೂರ್ತದ ದಿನ ಕುಂಡಲಿನೀ ಸೈನ್ಯಗಳು ಹಡಗುಗಳನ್ನೇರಿದುವು. "ಇನ್ನು ಹೊರಡಿರಿ, ವಿಜಯಶಾಲಿಗಳಾಗಿ ಬನ್ನಿರಿ!" ಎಂದು ಚಿತ್ರಸೇನನು ಆಜ್ಞೆ ಮಾಡಿದ ಅದೇಕ್ಷಣದಲ್ಲಿ, ದಕ್ಷಿಣ ದಿಕ್ಕಿನ ಆಕಾಶದಲ್ಲಿ ಕಣ್ಣು ಕೋರೈಸುವಂತಹ ಒಂದು ಪ್ರಕಾಶ ತೋರಿತು. ಮಹಾ ವೇಗದಿಂದ ಕದಲುವ ಆ ಪ್ರಕಾಶವು ಒಂದು ಬಾಲದ ನಕ್ಷತ್ರ! ಧೂಮಕೇತು! ಅದನ್ನು ನೋಡಿ ಎಲ್ಲರೂ ಭಯದಿಂದ ನಡುಗುತ್ತ, "ಅಶುಭ! ಅಶುಭ!" ಎಂದು ಕೂಗಿಕೊಂಡರು.

ರಾಜನ ಬದಿಯಲ್ಲೇ ಇದ್ದ ಆಸ್ಥಾನದ ಜ್ಯೋತಿಷ್ಯನು, "ಈ ಧೂಮಕೇತು ಆಪದವನ್ನು ಸೂಚಿಸುವಂಥಾದ್ದು. ಹಡಗುಗಳು ಹೊರಡದಂತೆ ನಿಲ್ಲಿಸಿರಿ. ಇನ್ನೊಂದು ಒಳ್ಳೆಯ ಮುಹೂರ್ತವನ್ನು ನೋಡೋಣ!" ಎಂದನು.

ಆ ಮಾತು ಕೇಳಿ ಸಮರಸೇನನು ಕೋಪಗೊಂಡು, "ಇಂತಹ ಅರ್ಥವಿಲ್ಲದ ಹುಚ್ಚು ನಂಬುಗೆಗಳಿಂದಲೇ ಕೆಲಸ ಕೆಡುವುದು. ಈಗ ತಡೆದು ಚಂಡ ಪ್ರಚಂಡ ಉತ್ಸಾಹದಲ್ಲಿರುವ ಸೈನಿಕರನ್ನು ನಿರುತ್ಸಾಹಪಡಿಸದಿರಿ, ಈ ಧೂಮಕೇತುವಿಗೂ ನಮ್ಮ ಸೈನಿಕರಿಗೂ ಏನು ಸಂಬಂಧ?" ಎಂದನು.

ಆಸ್ಥಾನ ಜ್ಯೋತಿಷ್ಯನು ಎಷ್ಟೋ ಹೇಳಿ ನೋಡಿದನು. ಸೇನಾಧಿಪತಿ ಮುಂದಿಟ್ಟ ಅಡಿಯನ್ನು ಹಿಂದಿಡುವುದೇ ಅಪಶಕುನವೆಂದು ಗಟ್ಟಿಯಾಗಿ ಪಟ್ಟು ಹಿಡಿದನು. ಚಿತ್ರಸೇನ ಮಹಾರಾಜನೂ ಸೇನಾಧಿಪತಿಯ ವಾದವನ್ನೇ ಬಲಪಡಿಸಿದನು. ನಿರುಪಾಯನಾಗಿ ಜೋತಿಷ್ಯನು ಸುಮ್ಮನಾದನು.

ಸೇನಾಧಿಪತಿ ಸಮರಸೇನನ ಆಜ್ಞೆಯಿಂದ ಹಡಗುಗಳ ಹಾಯಿಗಳು ಬಿಡಿಸಿಕೊಂಡುವು. ಯುದ್ಧ ಹಡಗುಗಳು ದಕ್ಷಿಣ ದಿಕ್ಕಿನಲ್ಲಿ ಕಾಣುವ ಧೂಮಕೇತುವಿಗೆ ಅಭಿಮುಖವಾಗಿ ಹೊರಟುವು.

—(ಇನ್ನೂ ಇದೆ)






## ೨

[ಕುಂಡಲಿನೀ ದ್ವೀಪದ ರಾಜನಾದ ಚಿತ್ರಸೇನನು ಒಳ್ಳೆಯ ಯಶಸ್ಸಿಗಾಗಿ ತೆರಿಗೆಗಳನ್ನು ಅರ್ಧದಷ್ಟು ತಗ್ಗಿಸಿದನು. ಅದರಿಂದಾಗಿ ಖಜಾನೆ ಖಾಲಿಯಾಯಿತು. ಸೇನಾಧಿಪತಿಯ ಸಲಹೆಯಂತೆ ಇತರ ದೇಶಗಳಿಂದ ಧನವನ್ನು ದೋಚಿಕೊಂಡು ಬರಲು, ಕುಂಡಲಿನಿಯ ಸೈನ್ಯಗಳು ಹಡಗುಗಳಲ್ಲಿ ಹೊರಟುವು. ಅದೇ ಸಮಯದಲ್ಲಿ ದಕ್ಷಿಣ ದಿಕ್ಕಿನ ಆಕಾಶದಲ್ಲಿ ಒಂದು ಧೂಮಕೇತು ಕಾಣಿಸಿತು.]

ಧೂಮಕೇತುವನ್ನು ಲಕ್ಷ್ಯಮಾಡದೆ ಕುಂಡಲಿನೀ ರಾಜ್ಯದ ಸೈನ್ಯಗಳು ತುಂಬಿದ ಹಡಗುಗಳು ರೇವಿನಿಂದ ಒಂದೇಸಾರಿ ಹೊರಟು ಸಮುದ್ರದಲ್ಲಿ ಭರದಿಂದ ಹೋಗ ತೊಡಗಿದುವು. ಆಗ ಬೀಸುವ ಗಾಳಿ ಹಡಗುಗಳಿಗೆ ಅನುಕೂಲವಾಗಿತ್ತು. ಸಮುದ್ರವು ತುಂಬಾ ಪ್ರಶಾಂತವಾಗಿತ್ತು.

ಸೈನಿಕರೆಲ್ಲಾ ಅತ್ಯಂತ ಉತ್ಸಾಹದಲ್ಲಿದ್ದರು. ಆದರೆ ಸೇನಾಧಿಪತಿ ಸಮರಸೇನನು ಅವರ ಉತ್ಸಾಹದಲ್ಲಿ ಭಾಗಿಯಾಗಿ ತಿರುಗುತ್ತಿರಲಿಲ್ಲ. ಅವನು ಹಡಗಿನ ಮೇಲೆ ಒಂದು ಮೂಲೆಯಲ್ಲಿ ಎತ್ತರವಾದ ಆಸನದ ಮೇಲೆ ಕುಳಿತುಕೊಂಡು, ದಕ್ಷಿಣ ದಿಕ್ಕಿನಲ್ಲಿ ಹೊಳೆಯುತ್ತಿದ್ದ ಧೂಮಕೇತುವಿನ ಕಡೆಗೇ ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದನು.

ಅವನು ಹಾಗೇ ನೋಡುತ್ತಿದ್ದಂತೆ, ಆಕಾಶದ ಮೂಲೆಯಲ್ಲಿ ಕರ್ರಗಾಗಿ ಕಾಣುತ್ತಿದ್ದ ಕಾರ್ಮೋಡವು ಮೇಲೆದ್ದು ಹರಡಿ ಕಣ್ಣುಮುಚ್ಚಿ ಬಿಡಿಸುವುದರೊಳಗೆ ಧೂಮಕೇತುವನ್ನು ಮುಚ್ಚಿಹಾಕಿತು. ಆದರ ಬೆನ್ನಿಗೇ ಕಗ್ಗತ್ತಲೆಯ ರಾಶಿ ಸುತ್ತುಮುತ್ತಲೂ ಕವಿಯಿತು. ಗಾಳಿಯ ವೇಗ ಹೆಚ್ಚುತ್ತಿರಲು ಸಮುದ್ರವು ಉಕ್ಕೇರುತ್ತಾ ಗರ್ಜಿಸ



ತೊಡಗಿತು. ಇದನ್ನೆಲ್ಲ ನೋಡುತ್ತಿದ್ದಂತೆ ಸೈನಿಕರ ಉತ್ಸಾಹ ತಣ್ಣಗಾಗುತ್ತ, ಅಟ್ಟಹಾಸ ತಗ್ಗುತ್ತ ಸ್ತಬ್ಧರಾದರು. ದಿಗಿಲಿನಿಂದ ಎಲ್ಲರ ಎದೆಯೂ ನಡುಗತೊಡಗಿತು.

ಸಮರಸೇನನು ನಿಶ್ಚೇಷ್ಟನಾಗಿ ನೋಡುತ್ತಲೇ ಇದ್ದನು. ಅಷ್ಟರಲ್ಲಿ ನೌಕಾಧಿಪತಿ ಅವನ ಬಳಿಗೆ ಬಂದು, "ಮಹಾ ಸೇನಾನಿಗಳೇ ! ಸೈನಿಕರೆಲ್ಲಾ ಭಯಕಂಪಿತರಾಗಿದ್ದಾರೆ. ಅವರಲ್ಲಿ ಅನೇಕರು ತೀರಕ್ಕೆ ಸೇರುವುದು ಒಳ್ಳೇದೆಂದು ಕೂಗಾಡುತ್ತಿದ್ದಾರೆ. ಏನು ಮಾಡಲಿ ?" ಎಂದು ಕೇಳಿದನು.

ಸಮರಸೇನನು ಎದ್ದು ನಿಂತು ಒಮ್ಮೆ ಆಕಾಶದ ಕಡೆಗೂ, ಒಮ್ಮೆ ಅಲ್ಲಕಲ್ಲೋಲವಾಗುವ ಸಮುದ್ರದ ಕಡೆಗೂ ನೋಡಿದನು. ಆಮೇಲೆ ನೌಕಾಧಿಪತಿಯನ್ನು ನೋಡಿ, "ಹಾಗೆ ಹೆದರಬೇಕಾಗಿಲ್ಲ. ಕುಂಡಲಿನೀದೇವಿ ಕರುಣಿಸಿದರೆ ಬೇಗದಲ್ಲೇ ಭಯ ನಿವಾರಣೆಯಾಗಿ ಅನುಕೂಲಿಸುತ್ತದೆ. ನೀವು ಬೇಗನೇ ಕೆಳಗೆ ಹೋಗಿ, ನಾನು ಸೇನಾಧಿಪತಿಯಾಗಿ ಅನೇಕಾನೇಕ ಯುದ್ಧಗಳಲ್ಲಿ, ಎಷ್ಟೋ ಭೀಕರ ಅನುಭವಗಳಿಂದ ಹೇಳುತ್ತಿದ್ದೇನೆಂಯು ಆ ಸೈನಿಕರಿಗೆ ಧೈರ್ಯ ಹೇಳಿರಿ. ಇದೆಲ್ಲಾ ಪ್ರಕೃತಿ ಸಹಜ. ಯಾವ ಹಾನಿಯೂ ನಮಗಾಗುವುದಿಲ್ಲ" ಎಂದನು.

ಆಮೇಲೆ ಸ್ವಲ್ಪ ಹೊತ್ತಿನವರೆಗೆ ಯಾವ ಬದಲಾವಣೆಯೂ ಕಾಣಲಿಲ್ಲ. ಸಮುದ್ರವು ದೊಡ್ಡ ದೊಡ್ಡ ತೆರೆಗಳನ್ನು ಎಬ್ಬಿಸುತ್ತ ಅಲ್ಲಕಲ್ಲೋಲವಾಗುತ್ತಲೇ ಇದ್ದಿತು. ವಾತಾವರಣವೆಲ್ಲ ಇನ್ನೂ ಕಪ್ಪಗಾಗಿ. ಭಯಂಕರವಾದ ಸುಳಿಗಾಳಿ ಮೇಲಿಂದ ಮೇಲೆ ಬೀಸ ತೊಡಗಿತು.

ಸೇನಾಧಿಪತಿ ಹೇಳಿ ಕಳುಹಿಸಿದ ಧೈರ್ಯದ ಮಾತುಗಳು ಸೈನಿಕರನ್ನು ಗಟ್ಟಿ ನಿಲ್ಲಿಸಲಾರದೆ ಹೋದುವು. ಅವರು ಹಾಹಾಕಾರ ಮಾಡ ತೊಡಗಿದರು. ಗಾಳಿಯ ವೇಗದಿಂದ ಹಡಗುಗಳೆಲ್ಲ ಚೆದರಿ ಗುರಿತಪ್ಪಿ ಸಿಕ್ಕಸಿಕ್ಕಲ್ಲಿಗೆ ಓಡುತ್ತಿದ್ದುವು. ಸೈನಿಕರು ಜೀವ ಉಳಿದರೆ ಬೇಕಾಗುವುದೆಂದು, ಅಗತ್ಯದ ವಸ್ತುಗಳನ್ನು ಎತ್ತಿಕೊಂಡು, ಪ್ರಾಣ ರಕ್ಷಣೆಗಾಗಿ ಹೆಣಗಾಡ ತೊಡಗಿದರು.

ತುಫಾನಿನ ವೇಗವು ಇನ್ನೂ ಹೆಚ್ಚಾಯಿತು. ಹಡಗುಗಳು ನಾವಿಕರ ಸ್ವಾಧೀನ ತಪ್ಪಿ ಒಂದನ್ನೊಂದು ಢಿಕ್ಕೀ ಹೊಡೆಯುತ್ತ ಛಿನ್ನಾಭಿನ್ನವಾಗ ತೊಡಗಿದುವು. ಸಮರಸೇನನು ಪ್ರಯಾಣಿಸುವ ಹಡಗು ಅತ್ಯಂತ ಭದ್ರವಾಗಿ ನಿರ್ಮಿಸಲ್ಪಟ್ಟಿತ್ತು. ಆ ಕಾರಣದಿಂದ ಅದು ಇತರ ಹಡಗುಗಳ ಹೊಡೆತಕ್ಕೆ ತಡೆದುಕೊಂಡು ಮೇಲೆ ಕೆಳಗೆ ತೇಲುತ್ತಾ ಹೋಗುತ್ತಿದ್ದಿತು.

ಈ ಬೀಭತ್ಸವನ್ನು ಈವರೆಗೂ ನೋಡದಿದ್ದ ಸಮರಸೇನನು ಈಗ ಚಲಿಸಿ ಚಿಂತಿಸತೊಡಗಿದನು. ಸುತ್ತುಮುತ್ತಲೂ ಏನಾಗಿದೆ ಎಂದು ತಿಳಿಯಲು ಬೆಳಗಾಗ ಬೇಕಾಗಿತ್ತು. ಎಷ್ಟು ಹಡಗುಗಳು

ಮುಳುಗಿದುವೋ ? ಎಷ್ಟು ಸೈನಿಕರು ಸತ್ತರೋ ? ಆ ಜ್ಯೋತಿಷ್ಯನು ಹೇಳಿದಂತೆ. ಇದೇನಾದರೂ ಉತ್ಪಾತ ವಾಗಿದ್ದೀತೆ ? ಅವನು ತನ್ನ ಹಡಗಿನಲ್ಲಿರುವ ಕುಂಡಲಿನೀದೇವಿಯ ವಿಗ್ರಹದ ಮುಂದೆ ಕುಳಿತು ಕೈಮುಗಿದು ಕಾಪಾಡುವಂತೆ ಬೇಡಿಕೊಳ್ಳ ತೊಡಗಿದನು.

ಆಮೇಲೆ ತುಂಬಾ ತಡವಾಗಿ ಸೂರ್ಯೋದಯ ವಾದಂತೆನಿಸಿತು. ಆಕಸ್ಮಿಕವಾಗಿ ಹೊರಟ ಸುಳಿ ಗಾಳಿಯೂ, ಕಾರ್ಮೋಡಗಳೂ ವಿಚ್ಛಿತ್ತಿಯಾಗಿ ಹೋದುವು. ಭಕ್ತಿಯಿಂದ ಪ್ರಾರ್ಥಿಸುತ್ತಾ ದೇವಿಯ ಮುಂದೆ ಕುಳಿತಿದ್ದ ಸಮರಸೇನನು, ಏನೋ ಕೂಗನ್ನು ಕೇಳಿ ದಡಕ್ಕನೆದ್ದು ಅತ್ತಿತ್ತ ನೋಡಿದನು. ಕೆಳ ಬದಿಯಲ್ಲಿದ್ದ ಸೈನಿಕರು ಕೋಲಾಹಲವಾಗಿ "ಅಯ್ಯಾ ಸೇನಾನೀ ದೊರೆಗಳೇ ! ಸಮುದ್ರವು ಪ್ರಶಾಂತವಾಗಿದೆ. ತಾವು ಒಮ್ಮೆ ಕೆಳಗೆ ಬಂದು ಮುಂದೇನು ಮಾಡಬೇಕೆಂಬುದನ್ನು ಆಜ್ಞಾಪಿಸ ಬೇಕು " ಎಂದು ಕೂಗುತ್ತಿದ್ದರು.

ಸಮರಸೇನನಿಗೆ ತಲೆಯ ಮೇಲೆ ಹೊತ್ತಿದ್ದ ದೊಡ್ಡ ಭಾರವನ್ನು ಇಳಿಸಿದಂತೆನಿಸಿತು. ಆದರೆ ಆ ಸಂತೋಷವು ಬಹಳ ಹೊತ್ತು ನಿಲ್ಲಲಿಲ್ಲ. ಸುತ್ತಲೂ ನೋಡಿದಾಗ ಒಟ್ಟು ಹೊರಡುವಾಗ ಇದ್ದ ಹಡಗು ಗಳಲ್ಲಿ ಸುಮಾರು ಅರ್ಧ ಭಾಗದಷ್ಟು ಮುಳುಗಿ ಹೋಗಿದ್ದುವು. ಉಳಿದುವು ದೂರ ದೂರ ಸುತ್ತಲೂ ಸಮುದ್ರದಲ್ಲಿ ತೇಲಿಯಾಡುತ್ತಿದ್ದುವು. ಅಲ್ಲಲ್ಲಿ ಹಡಗಿನ ಭಾಗಗಳು ಕಪ್ಪು ಕಪ್ಪಾಗಿ ಕಾಣು ತ್ತಿದ್ದುವು. ಸೈನಿಕರಲ್ಲಿ ಅನೇಕರು ಸಮುದ್ರದಲ್ಲಿ ಮುಳುಗಿ ಸತ್ತಿರಬಹುದು.

ಮುಳುಗದೆ ಉಳಿದು ತೇಲಾಡುತ್ತಿದ್ದ ಹಡಗು ಗಳನ್ನು ಒಂದಾಗಿ ಸೇರಿಸುವುದು ಪ್ರಥಮ ಕರ್ತವ್ಯ ವೆಂದು ಸಮರಸೇನನಿಗೆ ತೋರಿತು. ಕೂಡಲೇ ಹೋಗಿ ತಮ್ಮ ಹಡಗಿಗೆ ಲಂಗರು ಹಾಕಿಸಿದನು.



ಆಮೇಲೆ ದೋಣಿಗಳಲ್ಲಿ ಸೈನಿಕರನ್ನು ದೂರ ದೂರದಲ್ಲಿರುವ ಹಡಗುಗಳ ಕಡೆಗೆ ಕಳುಹಿಸಿ ತಮ್ಮ ಹಡಗಿನ ಕಡೆಗೆ ತರುವಂತೆ ಆಜ್ಞೆ ಮಾಡಿದನು. ಸ್ವಲ್ಪ ಹೊತ್ತಿಗೆ ಎಲ್ಲಾ ಹಡಗುಗಳೂ ಬಂದು ಸೇನಾನಿಯ ಹಡಗಿನ ಸುತ್ತಲೂ ಸೇರಿದುವು. ಸೈನಿಕರೆಲ್ಲಾ ಹಡಗುಗಳ ಮೇಲ್ಭಾಗದಲ್ಲಿ ಬಂದು ನಿಂತು ತಮ್ಮ ಸೇನಾನಿಗೆ ವಂದನೆಗಳನ್ನು ಸಲಿಸಿದರು. ಆ ಬದುಕಿ ಉಳಿದವರೆಲ್ಲ ರಾತ್ರಿಯ ತುಫಾನಿನಿಂದ ನಾನಾಯಾತನೆಗಳಿಗೆ ಒಳಗಾಗಿ ಮರಣದ ಅಂಚಿ ನಿಂದ ಪಾರಾಗಿ ಉಳಿದವರೇ !

ಸಪ್ಪಗೆ ತಲೆ ತಗ್ಗಿಸಿ ನಿಂತ ಸೈನಿಕರ ರೀತಿಯನ್ನು ನೋಡಿ ಸಮರಸೇನನು, ಪರಿಸ್ಥಿತಿ ಎಷ್ಟು ನಿರುತ್ಸಾಹವಾದುದೆಂಬುದನ್ನು ಊಹಿಸಿದನು. ರಾತ್ರಿ ಯಲ್ಲಿ ಎದ್ದು ಬಂದ ಘೋರದಿಂದ ಸೈನಿಕರಿಗೆ ಸಮುದ್ರವೆಂದರೆ ಮರಣದ ಹೆದರಿಕೆಯಾಗಿತ್ತು. ಆದುದರಿಂದ ಇನ್ನೂ ಸಮುದ್ರದ ಮೇಲೆ ಕಾಲ



ಕಳೆಯುವುದೆಂದರೆ ಸಾಧ್ಯವಾಗದ ವಿಷಯವಾಗಿತ್ತು. ತಾವು ಈಗ ಸಮುದ್ರದ ಮೇಲೆ ಯಾವ ಪ್ರಾಂತದಲ್ಲಿದ್ದೇವೆಂಬುದು ಗೊತ್ತಾಗುತ್ತಿದ್ದಿಲ್ಲ. ಯಾವುದಾದರೂ ತೀರವು ಎಲ್ಲಿದೆಯೋ? ಯಾವುದೋ ಒಂದು ಭೂಮಿಯ ಅಂಚು ಕಂಡರೆ ಸಾಕಾಗಿತ್ತು.

ಸಮರಸೇನನು ಸೈನಿಕನೊಬ್ಬನನ್ನು ಕರೆದು ತೆರೆಚಾಪೆಯ ನೀಳ್ಗಂಬದ ಮೇಲೆ ಹತ್ತಿ ಎಲ್ಲಿಯಾದರೂ ಭೂಪ್ರದೇಶ ಕಾಣುವುದೋ ನೋಡು ವಂತೆ ಹೇಳಿದನು.

ಆ ಸೈನಿಕನು ಆ ಕಂಬದ ತುದಿಗೆ ಹತ್ತಿದನು. ಎಲ್ಲರೂ ಅವನ ಮುಖದ ಕಡೆಗೇ ನೋಡುತ್ತಿದ್ದರು. ಆ ಸೈನಿಕನು ಸ್ವಲ್ಪಹೊತ್ತು ಸುತ್ತಲೂ ನೋಡಿ, "ಹತ್ತಿರದಲ್ಲೆಲ್ಲಿಯೂ ಭೂಪ್ರದೇಶ ಕಾಣುವುದಿಲ್ಲ. ಆದರೆ ಪೂರ್ವ ದಿಕ್ಕಿನಲ್ಲಿ ಬಹಳ ದೂರದಲ್ಲಿ ಹಕ್ಕಿಗಳು ಹಾರುವ ಹಾಗೆ ಕಾಣುತ ದೆ!" ಎಂದು ಕೂಗಿ ಹೇಳಿದನು.

ಆ ಮಾತು ಕೇಳಿ ಸಮರಸೇನನು "ಜೈ ಕುಂಡಲಿನೀ ಮಹಾದೇವಿಗೆ!" ಎಂದು ಉತ್ಸಾಹದಿಂದ ಕೂಗಿದನು. ಅವನನ್ನು ಅನುಸರಿಸಿ ಎಲ್ಲಾ ಸೈನಿಕರೂ ಉತ್ಸಾಹದಿಂದ ಮಹಾದೇವಿಗೆ ಜಯಜಯಾಕಾರ ಮಾಡಿದರು.

ಅನಂತರ ಸೇನಾನಿಯ ಆಜ್ಞೆಯಂತೆ ಹಡಗುಗಳೆಲ್ಲಾ ಹಕ್ಕಿಗಳು ಹಾರುವಂತೆ ಕಂಡ ಪೂರ್ವ ದಿಕ್ಕಿನ ಕಡೆಗೆ ಹೋಗತೊಡಗಿದುವು. ನೀಳ್ಗಂಬದ ಮೇಲೇರಿದ ಸೈನಿಕನು ಅಲ್ಲೇ ಇದ್ದು ಹಡಗುಗಳಿಗೆ ದಾರಿ ತೋರಿಸುತ್ತಿದ್ದನು. ಸ್ವಲ್ಪ ಹೊತ್ತಿಗೆ ನಡು ಮಧ್ಯಾಹ್ನವಾಯಿತು. ಕ್ರಮವಾಗಿ ಸೂರ್ಯನು ಪಶ್ಚಿಮಕ್ಕೆ ವಾಲುತ್ತಾ ಹೋಗುತ್ತಿರಲು ಭೂಮಿಯ ಗುರುತು ಕಾಣದುದರಿಂದ ಸೈನಿಕರಲ್ಲಿ ಮತ್ತೆ ನಿರುತ್ಸಾಹವೂ ದಿಗಿಲೂ ತಲೆಯೆತ್ತ ತೊಡಗಿದುವು. "ಅಯ್ಯೋ! ಸೂರ್ಯ ಮುಳುಗಲಿಕ್ಕಾಯಿತು!



ಭೂಮಿ ಬರೀ ಭ್ರಮೆಯಾಯಿತು!" ಎಂದು ಒಬ್ಬ ಸೈನಿಕನು ಕೂಗಿದನು." ಅಯ್ಯಯ್ಯೋ ! ಇನ್ನು ಸ್ವಲ್ಪ ಹೊತ್ತಿಗೆ ಕತ್ತಲೆ ಬರುತ್ತೆ. ಈ ಮಹಾಸಮುದ್ರದ ನಡುವಿನಲ್ಲಿ ದಾರೀ ದಿಕ್ಕೂ ತಿಳಿಯದೆ ಮತ್ತೆ ಏನು ಅಪಾಯ ಬರುತ್ತೋ ! ನಾವೂ ಸಮುದ್ರಕ್ಕೆ ಬಲಿಯಾಗಿಬಿಡ್ತೇವೇನೋ? " ಎಂದು ಹೇಳುತ್ತ ಉಳಿದ ಸೈನಿಕರು ಭೀತರಾಗ ತೊಡಗಿದರು.

ಇದ್ದಕ್ಕಿದ್ದ ಹಾಗೆ ಕಂಬದ ತುದಿಯಲ್ಲಿದ್ದ ಸೈನಿಕನು, "ಆಗೋಗೋ ! ಭೂಮಿ ! ಹತ್ತಿರದಲ್ಲೇ ಇದೆ ! ಹೋಗಲಿ ಹೀಗೆಯೇ !" ಎಂದು ಉಚ್ಚಕಂಠದಿಂದ ಕೂಗಿದನು. ಸೈನಿಕರಿಗೆಲ್ಲ ಒಮ್ಮೆಗೇ ಉತ್ಸಾಹವೇರಿತು.

ಎಲ್ಲ ಹಡಗುಗಳೂ ಭೂಮಿ ಕಾಣುವ ದಿಕ್ಕಿಗೆ ಭರದಿಂದ ಸಾಗತೊಡಗಿದುವು. ಸೂರ್ಯನು ಮುಳುಗಿದನು. ಸ್ವಲ್ಪ ಹೊತ್ತಿಗೆ ಎಲ್ಲಾ ಹಡಗುಗಳೂ ತೀರವನ್ನು ತಲಪಿದುವು. ಅದು ಯಾವುದೋ ಒಂದು ದ್ವೀಪವಾಗಿರಬೇಕು. ಸೈನಿಕರೆಲ್ಲಾ ಕೆಳಗಿಳಿಯಲು ಆತುರಪಡುತ್ತಿದ್ದರು. ಅದನ್ನು ತಿಳಿದಿದ್ದ ಸಮರಸೇನನು, "ನನ್ನ ಅಪ್ಪಣೆ ಇಲ್ಲದೆ ಯಾರೂ ಹಡಗಿನಿಂದ ಇಳಿಯಕೂಡದು. ಜಾಗ್ರತೆ !" ಎಂದು ಆಜ್ಞೆ ಮಾಡಿದನು.

ನಿಜವಾಗಿ ಅವರು ಬಂದು ಸೇರಿರುವುದು ಸಮುದ್ರದ ಮಧ್ಯದಲ್ಲಿರುವ ಒಂದು ಮಹಾ ದ್ವೀಪವಾಗಿತ್ತು. ಆ ದ್ವೀಪದೊಳಗಿನ ಪರ್ವತ ಪಂಕ್ತಿಗಳು ಸಮುದ್ರದೊಳಗೂ ಒತ್ತಿಕೊಂಡು ಹೋಗಿದ್ದುವು. ಪರ್ವತಗಳಲ್ಲಿ ಮಹಾ ವೃಕ್ಷಗಳು ತುಂಬಿಕೊಂಡಿದ್ದುವು. ವೃಕ್ಷಗಳ ನಡುವೆ ಚಿತ್ರ ವಿಚಿತ್ರವಾದ ವನ್ಯ ಮೃಗಗಳೂ ಇರಬಹುದು. ಕತ್ತಲೆಯಲ್ಲಿ ಮಸಕು ಮಸಕಾಗಿ ಕಾಣುವಷ್ಟರ ಮಟ್ಟಿಗೆ ಆ ದ್ವೀಪದ ನೆಲೆಯನ್ನು ಊಹಿಸಿಕೊಂಡ ಸಮರಸೇನನು, ಜಾಗರೂಕತೆಯಿಲ್ಲದೆ ದುಡುಕಿ ಇಳಿಯುವುದರಿಂದ ಅಪಾಯ ಉಂಟಾಗಬಹುದೆಂದು ಅನುಮಾನಿಸಿದನು.

ಹಡಗುಗಳಲ್ಲಿರುವ ಸೈನಿಕರನ್ನು ಎರಡು ಭಾಗ ಮಾಡಿ, ಅವರಲ್ಲಿ ಕೆಲವರನ್ನು ಚಿಕ್ಕಚಿಕ್ಕ ದೋಣಿಗಳಲ್ಲಿ ದ್ವೀಪದ ತೀರಕ್ಕೆ ಕಳುಹಿಸುವುದು ಒಳ್ಳೆಯದೆಂದು ಸಮರಸೇನನಿಗೆ ತೋರಿತು. ಅವರು ಹೋಗಿ ದ್ವೀಪದೊಳಗಿನ ಪರಿಸ್ಥಿತಿಗಳನ್ನು ತಿಳಿದು ಬಂದ ಮೇಲೆ ಉಳಿದವರನ್ನು ಕಳುಹಿಸುವುದು ಒಳ್ಳೆಯದೆಂದು ಸಮರಸೇನನು ಯೋಚಿಸಿದನು.

ಆದರೆ ದ್ವೀಪದೊಳಗೆ ಹೋಗಿ ಪರಿಸ್ಥಿತಿಗಳನ್ನು ಅಳೆದು ನೋಡಿ ಹಿಂದಿರುಗಿ ಬರಲು ಸಮರ್ಥರಾದ ಸೈನಿಕರು ಯಾರು ? ಅರಣ್ಯ ಪರ್ವತಗಳಿಂದ ಕೂಡಿದ ಹೊಸ ಪ್ರದೇಶಕ್ಕೆ ಹೋಗಿ, ಅದು ಎಂತಹ ಸ್ಥಳವೆಂದು ತಿಳಿದುಕೊಂಡು ಬರಬೇಕಾದರೆ ಧೈರ್ಯ ಸಾಹಸಗಳ ಜತೆಗೆ ಸಮಯೋಚಿತವಾದ ಯುಕ್ತಿಗಳನ್ನು ಪ್ರಯೋಗಿಸುವ ಯೋಚನಾ



ಶಕ್ತಿಯೂ ಇರಬೇಕು. ಇದನ್ನು ಯೋಚನೆಮಾಡು ವಾಗ ಅಂತಹ ಯಾವ ಸೈನಿಕನೂ ತೋರಲಿಲ್ಲ. ತಾನೇ ಸ್ವಯಂ ಹೋಗಿ ಬರುವುದೇ ಒಳ್ಳೆಯದೆಂದು ಸಮರಸೇನನಿಗೆ ತೋರಿತು. ಅವನ್ನು ತನ್ನ ಖಾಸಾ ಸೈನಿಕರಲ್ಲಿ ಆರು ಮಂದಿಯನ್ನು ಆರಿಸಿಕೊಂಡು ಚಿಕ್ಕದೋಣಿಯಲ್ಲಿ ಹೊರಟು ತೀರಕ್ಕೆ ಹೋಗಿ ಭೂಮಿಯ ಮಣ್ಣಿಗೆ ಇಳಿದನು.

ಎಲ್ಲಿಯೂ ನರಸಂಚಾರವಿದ್ದಂತೆ ಕಾಣಲಿಲ್ಲ. ಮಾನವರು ನಡೆದಾಡಿದ ಹೆಜ್ಜೆಯ ಗುರುತುಗಳೂ ಅಲ್ಲಿ ಕಾಣಲಿಲ್ಲ. ಕಾಣಲಿಲ್ಲವೆಂಬಷ್ಟು ಪ್ರಕಾಶವು ಅಲ್ಲೆಲ್ಲಾ ಹರಡಿರುವುದನ್ನು ನೋಡಿ ಸಮರಸೇನನಿಗೆ ಆಶ್ಚರ್ಯವಾಯಿತು. ಸಮುದ್ರವೂ ಶುಭ್ರಾಕಾಶದ ಪ್ರಕಾಶವೂ ಒಂದರ ಮೇಲೊಂದು ಪ್ರತಿಬಿಂಬಿಸುವ ಕನ್ನಡಿಯಂತಾಗಿ, ಈ ಪ್ರಕಾಶ ಬಂದಿರಬಹುದೇ ? ಒಂದು ಕಡೆ ಆಕಾಶದಿಂದ ಪ್ರಕಾಶ ಪುಂಜವೇ ಈ ದ್ವೀಪದ ಮೇಲ್ಮೆ ಬೀಳುವಂತೆ ಕಾಣುತ್ತಿತ್ತು. ಅದು ಈ ದಿಕ್ಕಿಗೇ ಬಂದಿದ್ದ ಧೂಮಕೇತುವಿನಿಂದ ಸುರಿಯುವ ಪ್ರಕಾಶವೆಂದು ಸಮರಸೇನನು ತಿಳಿದನು. ಅದು ತಮ್ಮನ್ನೇ ಬೆನ್ನಟ್ಟಿ ಬಂದಂತಿದೆ. ಸಮರ ಸೇನನು ಧೈರ್ಯದಿಂದ ಕತ್ತಿಯನ್ನು ಹಿಡಿದು ಕೊಂಡು ಮುಂದೆ ಮುಂದೆ ಸಾಗಿದನು. ಅವನಿಗೆ ಇನ್ನೊಂದು ಸಂದೇಹವಾಯಿತು. ಅಲ್ಲಿಯ ಮನುಷ್ಯರು ತಮ್ಮ ಸುಳಿವನ್ನು ಕಂಡು ಮರಗಳ ಹಿಂದೆ ಅಡಗಿ ತಮ್ಮ ಮೇಲೆ ಬಾಣ ಪ್ರಯೋಗ ಮಾಡಿದರೆ ಏನು ಗತಿ ?

ಸರ್ವ ಜಾಗ್ರತೆಯಿಂದ ನಡೆಯುತ್ತಿದ್ದ ಸಮರ ಸೇನನಿಗೆ ಸುತ್ತಲೂ ಕವಿದ ನಿಶ್ಶಬ್ದತೆಯನ್ನು ಭೇದಿಸಿಕೊಂಡು ಹಠಾತ್ತಾಗಿ ಎದ್ದ ಭಯಂಕರ ಗರ್ಜನೆಯೊಂದು ಕೇಳಿಸಿತು. ಮತ್ತೆ ನಿಶ್ಶಬ್ದತೆ. ಸೈನಿಕನೊಬ್ಬನು ಸಣ್ಣದನಿಯಿಂದ "ಸೇನಾನಿಯವರೆ, ಇದು ಯಾವ ಪ್ರಾಣಿಯ ಶಬ್ದವೋ ? ವಿಕೃತವಾಗಿ ಭಯಂಕರವಾಗಿದೆ. ಇಂಥಾ ಶಬ್ದ ಈವರೆಗೂ ನಾವು ಕೇಳಿಲ್ಲ" ಎಂದನು ನಡುಗುವ ಕಂಠದಿಂದ.

ಉಳಿದ ಸೈನಿಕರು ಕೂಡಾ ಅಚೀಚೆ ನೋಡುತ್ತ ನಡುಗುತ್ತಿದ್ದರು. ಸಮರಸೇನನು ಅವರಿಗೆ ಧೈರ್ಯ ಹೇಳಿ ಮುಂದೆಮುಂದೆ ನಡೆಯುತ್ತಿರಲು, ಸೈನಿಕರೂ ಅವನನ್ನು ಅನುಸರಿಸಿದರು. ಸ್ವಲ್ಪ ಹೊತ್ತಿಗೆ ಒಂದು ಸ್ಥಳದಲ್ಲಿ ನಿಂತರು. ಅವರ ಸುತ್ತಲೂ ಗುಂಪು ಗುಂಪಾಗಿ ಮರಗಳಿದ್ದುವು. ಒಂದು ಕಡೆ ತುಸುದೂರದಲ್ಲಿ ದೊಡ್ಡದೊಂದು ಕೊಳವಿರುವುದು ಕಾಣುತ್ತಿತ್ತು. ಆ ಕೊಳದ ಹತ್ತಿರ ಕಣ್ಣಿಗೆ ಕಾಣುವ ಭಯಂಕರ ದೃಶ್ಯವನ್ನು ನೋಡಿ ಅವರೆಲ್ಲ ನಿಶ್ಚೇಷ್ಟಿತರಾದರು.

ಕೊಳದ ತೀರದಲ್ಲಿ ಎರಡು ವಿಕೃತ ಪ್ರಾಣಿಗಳು ಒಂದರ ಮೇಲೊಂದು ಬಿದ್ದು ಹೋರಾಡು ತ್ತಿದ್ದುವು. ಮತ್ತೆ ಕೆಲವು ಪ್ರಾಣಿಗಳು ದೂರದಲ್ಲಿ ಮರಗಳ ಕೆಳಗೆ ನಿಂತು ಆ ಹೋರಾಟವನ್ನು

ನೋಡುತ್ತಿದ್ದುವು. ಅಕ್ಕಪಕ್ಕದಲ್ಲಿರುವ ಮರಗಳ ಕೊಂಬೆಯಲ್ಲಿ ಮನುಷ್ಯಾಕಾರದಲ್ಲಿರುವ ದೊಡ್ಡ ದೊಡ್ಡ ನರವಾನರಗಳು, ಆ ಹೋರಾಟವನ್ನು ನೋಡುತ್ತ, ಮಧ್ಯೆ ಮಧ್ಯೆ ತಮ್ಮೊಳಗೇನೋ ಮಾತಾಡಿಕೊಳ್ಳುತ್ತಿದ್ದುವು. ಅವುಗಳ ಕೈಗಳಲ್ಲಿ ಕಲ್ಲಿನಿಂದಾದ ಬೇರೆಬೇರೆ ಆಕೃತಿಯ ಮೊರಟಾದ ಆಯುಧಗಳಿದ್ದುವು.

ಸಮರಸೇನನು ಆ ದೃಶ್ಯಗಳನ್ನು ಸೈನಿಕರಿಗೆ ತೋರಿಸುತ್ತ, "ನಿಜಕ್ಕೂ ಅಲ್ಲಿರುವುದೆಲ್ಲವೂ ವಿಚಿತ್ರ ಪ್ರಾಣಿಗಳೇ. ಆ ಮರದಲ್ಲಿರುವಂಥವು ನರರೂ ಅಲ್ಲ, ವಾನರರೂ ಅಲ್ಲ. ಶಿಲಾಯುಗದಲ್ಲಿದ್ದ ಮಾನವರನ್ನೇ ನಾವೀಗ ನೋಡುತ್ತಿದ್ದೇವೆ. ಇಲ್ಲಿ ಹೋರಾಡುವ ಪ್ರಾಣಿಗಳು ಅನೇಕ ಲಕ್ಷ ವರ್ಷಗಳಷ್ಟು ಹಿಂದಿನವು!" ಎಂದನು.

ಅದಕ್ಕೇನು ಹೇಳಬೇಕೆಂದು ಆ ಸೈನಿಕರಿಗೆ ತೋರಲಿಲ್ಲ. ಇಷ್ಟೊಂದು ವಿಲಕ್ಷಣ ಭಯಂಕರವಾದ ದ್ವೀಪದಲ್ಲಿ ದೋಚಿಕೊಂಡು ಹೋಗಲು ಧನರಾಶಿಗಳಿರಲು ಸಾಧ್ಯವೆ? ಅಸಲು ಜೀವ ಉಳಿಸಿಕೊಂಡು ಹೋಗುವುದೇ ದೊಡ್ಡ ಮಾತು.

ಸೇನಾನಿ ಸಮರಸೇನನ ಮನಸ್ಸೂ ಏನೇನೋ ಯೋಚಿಸಿಕೊಂಡಿದ್ದಿತು. ಕುಂಡಲಿನೀ ರಾಜ್ಯದ ಧನಾಗಾರವನ್ನು ತುಂಬಿಸಲು ದ್ವೀಪ ರಾಜ್ಯಗಳನ್ನು ಕೊಳ್ಳೆ ಹೊಡೆಯಲು ಹೊರಟು, ಅರ್ಧದಷ್ಟು ಬಲವನ್ನು ಸಮುದ್ರಕ್ಕೆ ಬಲಿಗೊಟ್ಟು, ಯಾವುದೋ ಭಯಂಕರ ದ್ವೀಪಕ್ಕೆ ತಲಪಿ ಸಿಕ್ಕಿಕೊಂಡೆವಲ್ಲಾ? ಮುಂದಿನ ಕರ್ತವ್ಯವಾದರೂ ಏನು? ಇಲ್ಲಿನ ಈ ವಿಚಿತ್ರ ಪ್ರಾಣಿಗಳು ತಮ್ಮನ್ನು ನೋಡಿಬಿಟ್ಟರೆ ಏನು ಮಾಡುವುವೋ?

ಕೊಳದ ತೀರದಲ್ಲಿ ಹೋರಾಡುತ್ತಿದ್ದ ಪ್ರಾಣಿಗಳ ಕಾದಾಟ ಉಚ್ಚಘಟ್ಟಕ್ಕೆ ಮುಟ್ಟಿತು. ನಿಶ್ಶಬ್ದತೆಯನ್ನು ಸೀಳಿಕೊಂಡು ಬರುವ ಅವುಗಳ ವಿಕೃತವಾದ ಆರ್ಭಟೆಯನ್ನು ಕೇಳಿ ಆನೆಗಳು ದೂರ ದೂರ ಓಡತೊಡಗಿದುವು. ಹಾಗೆ ಓಡುವಾಗ ಆನೆಗಳ ಗುಂಪಿನಿಂದ ಬೇರ್ಪಟ್ಟ ಪರ್ವತಾಕಾರದ ಒಂದು ಆನೆ ಅಡ್ಡಕ್ಕೆ ತಿರುಗಿ ದೊಡ್ಡ ಹೆಜ್ಜೆಗಳಿಂದ ಓಡುತ್ತಾ, ಸಮರಸೇನನೂ ಸೈನಿಕರೂ ಅಡಗಿ ನಿಂತಿರುವ ಮರಗಳ ಕಡೆಗೇ ಬರತೊಡಗಿತು.

ಸಮರಸೇನನು ಸೈನಿಕರಿಗೆ ಸನ್ನೆ ಮಾಡಿ ಪಕ್ಕದಲ್ಲಿದ್ದ ಮರದ ಮೇಲಕ್ಕೆ ಹಾರಿ ಸರಸರನೆ ಮೇಲೇರಿದನು. ಸೈನಿಕರೂ ಅವನನ್ನು ಅನುಸರಿಸಿ ಮರವನ್ನೇರಿದರು. ಅಷ್ಟರಲ್ಲಿ ಅಲ್ಲೆಲ್ಲಿಯೋ ಹೊಂಚಿಕೊಂಡಿದ್ದ ಎರಡು ಸಿಂಹಗಳು ಭಯಂಕರವಾಗಿ ಗರ್ಜಿಸುತ್ತ ಆನೆಯ ಮೇಲಕ್ಕೆ ಒಂದೇಸಾರಿ ಹಾರಿದುವು. —(ಇನ್ನೂ ಇದೆ)






೩

[ಕುಂಡಲಿನೀ ಸೈನ್ಯಗಳಿಂದ ತುಂಬಿದ ಹಡಗುಗಳು ಸಮುದ್ರದಲ್ಲಿ ಚೆಲ್ಲಾ ಚೆದರಾಗಿ ಹೋದುವು. ಸೇನಾನಿಯಾದ ಸಮರಸೇನನು ತುಫಾನು ನಿಂತ ಮೇಲೆ ಉಳಿದ ಹಡಗುಗಳನ್ನು ಒಂದುಗೂಡಿಸಿ ಯಾವುದೋ ಒಂದು ದ್ವೀಪವನ್ನು ತಲುಪಿ, ಕೆಲಮಂದಿ ಸೈನಿಕರನ್ನು ಮಾತ್ರ ತನ್ನೊಂದಿಗೆ ಕರೆದುಕೊಂಡು ಆ ದ್ವೀಪದಲ್ಲಿ ಮುಂದೆ ಹೋದನು. ಅಲ್ಲಿಯ ವಿಚಿತ್ರ ಪ್ರಾಣಿಗಳ ಹೋರಾಟವನ್ನೂ ಓಡಿಬರುವ ಆನೆಯನ್ನೂ ನೋಡಿ ಹೆದರಿ ಮರವನ್ನೇರಿದನು.]

ಸಮರಸೇನನನ್ನನುಸರಿಸಿ ಅವನ ಜತೆಗಾರರಾದ ಸೈನಿಕರೂ ದೂರ ಓಡಲು ಧೈರ್ಯ ಸಾಲದೆ, ತಮ್ಮ ಒಡೆಯನು ಏರಿದ ಮರದ ಮೇಲೆಯೇ ಏರಿದರು. ಅವರೆಲ್ಲ ಆ ಹೆಮ್ಮರದ ಕೊಂಬೆಗಳಲ್ಲಿ ಅಡಗಿಕೊಂಡು ಅದ್ಭುತ ಮೃಗಗಳ ಮಹಾ ಸಮರವನ್ನು ನೋಡ ತೊಡಗಿದರು. ಎರಡು ಸಿಂಹಗಳ ಏಟಿಗೆ ಗುರಿಯಾದ ಆನೆ ಅವುಗಳಿಂದ ತಪ್ಪಿಸಿಕೊಳ್ಳಲು ನಾನಾ ಪ್ರಯಾಸ ಪಡುತ್ತಿದ್ದಿತು. ಆಗಾಗ ಏಳುವ ಅವುಗಳ ಘೀಂಕಾರ ಗರ್ಜನೆಗಳಿಂದ ಮರಗಳೆಲ್ಲ ನಡುಗುವಂತೆ ಭಾಸ ವಾಗುತ್ತಿತ್ತು. ಆನೆ ಓಡಾಡುತ್ತಾ ಬೀಸುವ ಸೊಂಡಿಲಿನ ಆಘಾತದಿಂದ ಮರಗಳು ಮಗುಚಿ ಬೀಳುತ್ತಿದ್ದುವು. ಹಾಗೆ ತಾವು ಏರಿಕೊಂಡ ಮರವೂ ಬಿದ್ದರೇನು ಗತಿ ?

ಸಮರಸೇನನೊಂದಿಗೆ ಮರದ ಕೊಂಬೆಯಲ್ಲಿ ಹುದುಗಿದ್ದ ಒಬ್ಬ ಸೈನಿಕನು, "ಸೇನಾನೀ ದೊರೆಗಳೇ, ನಾವೀಗ ದೊಡ್ಡ ಇಕ್ಕಟ್ಟಿಗೆ ಸಿಕ್ಕಿಬಿದ್ದೆವು. ಭಯಂಕರ ವಾದ ಈ ದ್ವೀಪಾರಣ್ಯದಲ್ಲಿ ನಾವು ದೋಚಿಕೊಂಡು ಹೋಗುವಂಥ ಧನರಾಶಿಗಳೇನೂ ಇರದು. ಈ ಪ್ರಾಣಿ ಗಳಿಂದ ತಪ್ಪಿಸಿಕೊಂಡರೆ ಅದೇ ದೊಡ್ಡ ನಿಧಿ!" ಎಂದನು.

ಆ ಮಾತಿನಿಂದ ಧೈರ್ಯಗೊಂಡ ಇನ್ನೊಬ್ಬ ಸೈನಿಕನು, "ಹೌದು ಹೌದು! ಧನರಾಶಿಗಳಿಗೇನು?



ನಾವು ನಮ್ಮ ಜೀವದೊಂದಿಗೆ ಹೊರಬಿದ್ದರೆ ಅದೇ ಹತ್ತು ಸಾವಿರ! ಬದುಕಿದ್ದರೆ ಏಷ್ಟೋ ನಿಧಿ ಸಿಕ್ಕೀತು!" ಎಂದನು.

ಸಮರಸೇನನು ಅವರಿಗೇನೂ ಉತ್ತರ ಹೇಳದೆ ದೀರ್ಘಾಲೋಚನೆಯಲ್ಲಿ ಮುಳುಗಿಹೋಗಿದ್ದನು. ಲೋಕದ ಪ್ರಜೆಗಳೆಲ್ಲಾ ನಾಗರೀಕರಾಗಿ ಒಳ್ಳೆಯ ಜೀವನವನ್ನು ರೂಪಿಸಿಕೊಂಡಿರುವ ಈ ಕಾಲದಲ್ಲಿ, ಇದೊಂದು ದ್ವೀಪವು ಇಷ್ಟೊಂದು ಭಿನ್ನವಾಗಿದೆಯೆಂದರೆ ಏನಾಶ್ಚರ್ಯ! ಈ ದ್ವೀಪವಾಸೀ ಪ್ರಾಣಿಗಳು ಯಾವುದೋ ಶಿಲಾಯುಗದ ದಶೆಯವರಾಗಿಯೇ ಇದ್ದಾರೆಂಬುದು ಕಣ್ಣೆದಿರೇ ಕಾಣುತ್ತಿದೆ. ಇಲ್ಲಿ ಒಬ್ಬ ರಾಜನೋ, ಒಂದು ಪರಿಪಾಲನೆಯ ಪದ್ಧತಿಯೋ ಏನೂ ಕಾಣುವುದಿಲ್ಲ. ಹಾಗಿರುವಾಗ ಈ ದ್ವೀಪದಲ್ಲಿ ಧನವಿರಲಿಕ್ಕೂ ಸಾಧ್ಯವಿಲ್ಲ. ಇಂಥಾ ಅದ್ಭುತ ದ್ವೀಪಕ್ಕೆ ನಮ್ಮನ್ನು ತಂದುಹಾಕಿದ್ದು ಧೂಮಕೇತುವೇ ಎಂದು ಆ ರಾಜಪುರೋಹಿತನಿಗೆ ಹೇಳಲು ಒಳ್ಳೇದಾಯಿತು...

ಸಮರಸೇನನ ಆಲೋಚನೆಯನ್ನು ತುಂಡುಮಾಡುವಂತೆ, ಅರಣ್ಯವೆಲ್ಲಾ ಪ್ರತಿಧ್ವನಿಸಿಕೊಂಡು. "ಹೇಯ್ ಕಾಲ ಭುಜಂಗಾ! ಕಂಕಾಳಾ! ಬನ್ನಿ ಬನ್ನಿ! ಆ ಚತುರ್ನೇತ್ರನನ್ನು ಹೇಗಾದರೂ ಹುಡುಕಿ ಹಿಡಿದು ಹತಮಾಡಿ ಬಿಡೀ! ಅವನು ಈ ದ್ವೀಪದಲ್ಲೇ ಇದ್ದಾನೆನ್ನಲು ಸಂದೇಹವಿಲ್ಲ. ಚೆನ್ನಾಗಿ ಹುಡುಕಿ ಹಿಡೀರಿ!" ಎಂದು ಪ್ರಳಯ ಭೀಕರ ಕಂಠ ಧ್ವನಿ ಮೊಳಗಿತು.

ಈ ಶಬ್ದಾಘಾತದಿಂದ ತನ್ನ ಎದೆ ನಿಂತುಹೋಯಿತೇನೋ ಅನಿಸಿತು ಸಮರಸೇನನಿಗೆ. ಸೈನಿಕರಂತೂ ಮರದೊಂದಿಗೆ ಮರವಾಗಿ ಅಂಟಿಹೋದರು. ಅದರ ಮಹತ್ವ ಎಷ್ಟರಮಟ್ಟಿಗೆ ಇತ್ತೆಂದರೆ, ಆ ಶಬ್ದ ಕೇಳಿದ್ದೇ ತಡ, ಆನೆ, ಸಿಂಹ, ಕೊಳದ ಸಮೀಪವಿದ್ದ ಪ್ರಾಣಿಗಳೆಲ್ಲಾ ಚೆಲ್ಲಾ ಚೆದರಾಗಿ ಓಡಿದುವು. ಮರದ ಮೇಲಿದ್ದ ನರವಾನರಗಳೂ ದೂರ ಓಡಿದುವು.




ಆ ಶಬ್ಧ ಹೊರಟ ದಿಕ್ಕನ್ನೇ ನೋಡ ನೋಡುತ್ತಿರಲು ಕೊಳದ ದಂಡೆಯ ಮೇಲೆ ಒಬ್ಬ ದೀರ್ಘ ಕಾಯದವನು ಕಾಣಿಸಿದನು. ಅವನು ಚಿಕ್ಕದೊಂದು ತಾಳೇ ಮರದಷ್ಟು ಎತ್ತರವಿದ್ದನು. ಅವನಿಗೆ ತೀಕ್ಷ್ಣ ದೃಷ್ಟಿಯ ಒಂದೇ ಒಂದು ಕಣ್ಣು ಮಾತ್ರವಿದ್ದಿತು. ಅವನ ಎರಡು ಕಾಲುಗಳನ್ನು ಸುತ್ತಿಕೊಂಡು, ಆಗಾಗ ಕೋರೆ ಹಲ್ಲುಗಳನ್ನು ತೆರೆದು ತೆರೆದು ತೋರಿಸುವ ಒಂದು ಸರ್ಪವಿದ್ದಿತು. ಅವನ ಹಿಂಗಡೆ ತಲೆಯ ಮೇಲು ಭಾಗದಲ್ಲಿ ಕದಲಿಕೊಂಡು ಬರುವ ಮನುಷ್ಯನ ತಲೆ ಬುರುಡೆ! ಯಾವ ಆಧಾರವೂ ಇಲ್ಲದೆ ತನ್ನ ಹಿಂದೆಯೇ ಆ ತಲೆ ಬುರುಡೆಯನ್ನು ತೇಲಿಕೊಂಡು ಬರುವಂತೆ ಮಾಡಬೇಕಾದರೆ ಅವನೆಂತಹ ಮಹಾ ಮಾಂತ್ರಿಕನೋ! ಈ ಭಯಂಕರ ಸ್ವರೂಪದವನು ಕೊಳದ ದಂಡೆಯಲ್ಲಿ ನಿಂತುಕೊಂಡು ಸುತ್ತಲೂ ನೋಡಿ ತಲೆಯಾಡಿಸಿ, ಗುಡುಗಿನ ದನಿಯಿಂದ ಹೀಗೆಂದನು : "ಹೇ! ಮಂತ್ರಮಯ ದ್ವೀಪ, ಎಕ್ಕೀ ಪೊದರಿನ ಗುಡ್ಡ, ಗುಡ್ಡದ ಕೊನೇ ಬಂಡೆ. ಆ ಬಂಡೇ ಮೇಲೆ ಹತ್ತಿ ನೋಡಿದರೆ ಏನು ಕಾಣುತ್ತದೋಯ್ ಕಂಕಾಳಾ ? ಥೂ ಮಂತ್ರಕಾಳಾ! ಹೇಳು ಹೇಳಾ!"

ಇದಕ್ಕೆ ಉತ್ತರವಾಗಿ ಆ ತಲೆ ಬುರುಡೆ ವಿಕಟಾಟ್ಟಹಾಸವಾಗಿ ಹಾರುತ್ತ ಶಿಳ್ಳಿನ ಧ್ವನಿಯಿಂಧ ಹೀಗೆಂದಿತು: "ನಟ್ಟ ನಡು ಸಮುದ್ರದಲ್ಲಿ ನಾಟ್ಯವಾಡುವ ನಾವೆ, ನಾವೆಯೊಳಗೆ ಧನರಾಶಿ. ನಾವೆಯ ಹೊರಗೆ ಕಾವಲು ಕಾಯುತ್ತಿದ್ದಾಳೆ ಮಿಂಚಿನ ಕಣ್ಣಿನ ಮಿಂಚಿನ ವೇಗದ ನಾಗಕನ್ಯೆ. ಆ ನಾಗಕನ್ಯೆಯನ್ನು ಹತಮಾಡಿ ಬಿಟ್ಟರೆ ಮತ್ತೆ ಯಾರೂ ಕೇಳುವವರಿಲ್ಲ. ನಾವೆಯಲ್ಲಿ ತುಂಬಿದ ಧನರಾಶಿಯಷ್ಟೂ ನಮ್ಮದೇ!"

"ಹೌದು. ಅಷ್ಟೊಂದು ಸಾಧಿಸಿಬಿಟ್ಟರೆ ಆ ಧನವೆಲ್ಲಾ ನಮ್ಮದೇ. ಆದರೆ ಕಂಕಾಳಾ! ಆ ಚತುರ್ನೇತ್ರ? ಹೂಂ. ಮೊದಲು ಅವನನ್ನು ಹತಮಾಡಬೇಕು." ಎಂದು ಹೂಂಕರಿಸಿದನು ಒಂಟಿ ಕಣ್ಣಿನವನು.

ಮರದ ಕೊಂಬೆಯಲ್ಲಿದ್ದು ಆ ಮಾತುಗಳನ್ನು ಕೇಳುತ್ತಿದ್ದ ಸಮರ ಸೇನನಿಗೆ ಒಂದು ಬದಿಯಲ್ಲಿ ಭಯವೂ, ಇನ್ನೊಂದು ಬದಿಯಲ್ಲಿ ಆಶ್ಚರ್ಯವೂ ಒಮ್ಮೆಗೇ ಉಂಟಾದುವು. ಈಗ ತಾವಿರುವುದು ಮಾಂತ್ರಿಕರ ದ್ವೀಪವೆಂದಾಯಿತು. ಈ ದ್ವೀಪದ ಒಂದಾನೊಂದು ಗುಡ್ಡದ ಬಂಡೇ ಮೇಲೆ ನಿಂತು ನೋಡಿದರೆ ಸಮುದ್ರದಲ್ಲಿ ಧನರಾಶಿಯೊಂದಿಗೆ ಕೂಡಿದ ನಾವೆಯೊಂದು ಕಾಣುತ್ತದೆ. ಅಪ್ರತಿಮ ಶಕ್ತಿಶಾಲಿನಿಯಾದ ನಾಗಕನ್ಯೆ ಅದನ್ನು ರಕ್ಷಿಸಿಕೊಂಡಿದ್ದಾಳೆ. ಇಷ್ಟು ತಿಳಿದುದರಿಂದ ಒಂದು ಆಶೆಯೂ ಹುಟ್ಟಿಕೊಂಡಿತು. ಧೂಮಕೇತುವಿನಿಂದ ಇಲ್ಲಿಯವರೆಗೆ ನಷ್ಟವಾಗಿ ತಮಗೆ ಲಾಭವಾಗುವುದೇನೋ ?

ಇನ್ನು ಆ ಚತುರ್ನೇತ್ರನು ಯಾರೊ ? ಈ ಒಂಟಿ ಕಣ್ಣಿನ ಭಯಂಕರದವನಿಗೂ, ಆ ಚತುರ್ನೇತ್ರನಿಗೂ ವೈರವೇಕೆ ಬಂದಿತು? ನಾವೆಯಲ್ಲಿರುವ ಧನರಾಶಿಯೇ ಅವರ ಶತ್ರುತ್ವಕ್ಕೆ ಕಾರಣವೇ? ಬರೀ ಧನರಾಶಿಯಲ್ಲ,




ಮಿಂಚಿನ ಕಣ್ಣಿನ ಹೆಣ್ಣು ನಾಗಕನ್ಯೆಯೂ ಇದ್ದಾಳೆ. ಅವೆರಡೂ ಜಗಳ ಕಾರಣಗಳೇ! ಅಥವಾ ಬೇರೇನಾದರೂ ಇರಬಹುದೆ ?

ಸಮರಸೇನನು ಹೀಗೆ ಆಲೋಚಿಸುತ್ತಿರಲು, ಒಂಟಿ ಕಣ್ಣಿನ ಮಾಂತ್ರಿಕನು ಕೊಳದ ತೀರದಿಂದ ಕಾಡಿನೊಳಗೆ ಹೊರಟು ಹೋದನು. ಅವನನ್ನು ಅನುಸರಿಸಿಕೊಂಡೇ ಸರ್ಪವೂ, ತಲೆಬುರುಡೆಯೂ ಹೋದುವು.

ಅದುವರೆಗೂ ಮರದಮೇಲೆ ಗದಗದಿಸಿಕೊಂಡಿದ್ದ ಸೈನಿಕರು ಆ ಏಕಾಕ್ಷಿ ಹೊಟುಹೋದ ಮೇಲೆ, ಸ್ವಲ್ಪ. ಉಸಿರು ಬಿಡಲು ಪ್ರಾರಂಭಿಸಿ. ಸಮರ ಸೇನನನ್ನು ನೋಡಿದರು, ನಾಲಗೆಯಿಂದ ತುಟಿಗಳನ್ನು ಸವರುತ್ತಾ. ಅವರು ಎಷ್ಟು ಹೆದರಿದ್ದಾರೆಂಬುದು ಸಮರಸೇನನಿಗೂ ಗೊತ್ತಾಯಿತು.

ಸೈನಿಕರಲ್ಲಿ ಒಬ್ಬನು ಗದಗದಿಸುವ ಕಂಠದಿಂದ, "ಈ ಒಕ್ಕಣ್ಣಿನವ ಬಹು ದೊಡ್ಡ ಮಂತ್ರವಾದಿಯಾಗಿರಬೇಕು. ಅವನ ಹಿಂದೆಯೇ ಹೋಗುವ ಕಾಲ ಸರ್ಪವನ್ನೂ ತಲೆ ಬುರುಡೆಯನ್ನೂ ನೋಡಿದರೆ ಎಂಥ ಧೈರ್ಯಶಾಲಿಗಾದರೂ ಭಯವಾಗುತ್ತದೆ. ಇಂತಹ ದ್ವೀಪದಿಂದ ನಾವು ಎಷ್ಟು ಬೇಗ ಪಾರಾದರೆ ಅಷ್ಟು ಒಳ್ಳೆಯದು!" ಎಂದನು. "ಹೌದು. ಜಾರಿಕೊಳ್ಳಲು ಇದೇ ಒಳ್ಳೇ ಸಮಯವೆಂದು ಕಾಣುತ್ತೆ!" ಎಂದನು ಇನ್ನೊಬ್ಬ ಸೈನಿಕ.

ಈ ಮಾತಿಗೆ ಸೇನಾಧಿಪತಿಯ ಬಾಯಿಯಿಂದ ಏನು ಉತ್ತರ ಬರುತ್ತದೋ ಎಂದು ಕೊಂಡು ಸೈನಿಕರು ಕಿವಿ ತೀಡಿಕೊಂಡು ಕುಳಿತಿದ್ದರು. ಆದರೆ ಸಮರಸೇನನು ಸುಮ್ಮನಿರುವುದನ್ನು ನೋಡಿ ಅವರಿಗೆ ಆಶ್ಚರ್ಯವಾಯಿತು. ಸಮರಸೇನನು ಸ್ವಲ್ಪ ಹೊತ್ತು ಸುಮ್ಮನಿದ್ದು, ಬಳಿಕ ತಲೆಯಾಡಿಸುತ್ತ, "ನಾವು ಸಾಹಸಕ್ಕಾಗಿಯೇ ಹೊರಟಿದ್ದೇವೆಂಬುದನ್ನು ಮರೆಯಬಾರದು. ಇಂತಹ ಭಯಂಕರ ದ್ವೀಪದಲ್ಲಿಯೂ ನಮಗೆ ಧನವು ಲಭಿಸುವ ಲಕ್ಷಣಗಳು ಕಾಣುತ್ತವೆ. ನಮಗೆ ಈಗ ಮುಖ್ಯವಾಗಿ ಇರಬೇಕಾದ್ದು, ಕಷ್ಟಗಳನ್ನು ಇದಿರಿಸುವ ಸಹನೆ, ಗುಂಡಿಗೆ ತುಂಬಾ ಧೈರ್ಯ, ಇವೆರಡೇ! ಧೈರ್ಯವಿರುವವರಿಗೇ ದೈವ ಸಹಾಯವೆಂಬುದನ್ನು ಗಟ್ಟಿಯಾಗಿ ನಂಬಿರಿ" ಎಂದನು.

ಹೀಗೆ ಹೇಳಿ ಸಮರ ಸೇನನು ಅವರ ಉತ್ತರವನ್ನು ಇದಿರು ನೋಡದೆ ಮರದಿಂದ ಕೆಳಗಿಳಿದನು. ಅವನ ಹಿಂದೆಯೇ ಸೈನಿಕರು ಕೂಡಾ ಕೆಳಗಿಳಿದರು. "ಇನ್ನು ಏನೇನನ್ನು ಸಂಧಿಸಬೇಕಾಗುತ್ತೋ" ಎಂಬ ಪ್ರಶ್ನೆ ಪ್ರತಿ ಸೈನಿಕನನ್ನೂ ಕಳವಳಗೊಳಿಸುತ್ತಿತ್ತು. ಆದರೂ ಅವನ ಮಾತಿನಿಂದ ಧೈರ್ಯಗೊಂಡು ಸಮರ ಸೇನನ ಆಜ್ಞೆಯನ್ನೇ ಅವರು ಕಾದು ಕೊಂಡಿದ್ದರು. ಬೇರೆ ಉಪಾಯವಾದರೂ ಏನಿದೆ?

ಸಮರಸೇನನು ಆ ಸೈನಿಕರ ಮುಖಗಳನ್ನು ಪರೀಕ್ಷಿಸಿ ನೋಡಿ, "ಕೇಳಿದಿರಷ್ಟೆ ? ಮಂತ್ರಮಯ ದ್ವೀಪ, ಎಕ್ಕೇಪೊದರಿನದ ಗುಡ್ಡ, ಗುಡ್ಡದ ಕೊನೆಯ ಬಂಡೆ ಅಂತ ಆ ಒಕ್ಕಣ್ಣ ಮಾಂತ್ರಿಕನು ಹೇಳಿದ

ಮಾತುಗಳು ? ಆ ಗುಡ್ಡವನ್ನು ಹುಡುಕಿ ಹಿಡಿದು ಬಿಟ್ಟೆವೆಂದರೆ, ನಾವು ಬಂದ ಕೆಲಸ ಬಹಳ ಮಟ್ಟಿಗೆ ನೆರವೇರಿದ ಹಾಗೆಯೇ! ಆಮೇಲೆ ಸಮಯಕ್ಕೆ ಸರಿಯಾಗಿ ಏನಾದರೂ ಉಪಾಯ ತೋರದಿರದು." ಎಂದನು.

ಆ ಮಾತುಗಳನ್ನು ಕೇಳಿ ಸೈನಿಕನೊಬ್ಬನು ಸಂದೇಹ ಪಡುತ್ತ, "ಆ ಮಾಂತ್ರಿಕ ಒಕ್ಕಣ್ಣನು ಹೇಳಿದ ಮಾತಿನಲ್ಲಿ ನಿಜವಿದೆಯೆಂದು ನಂಬುವಿರಾ? ಅದು ಎಂದಿನ ಸಂಗತಿಯೋ ಏನೋ! ಅಥವಾ ಅದೊಂದು ಮಂತ್ರದ ಪಲ್ಲವಿಯಾಗಿದ್ದರೂ ಇದ್ದೀತು. ಬೇರೆ ಯಾವ ದ್ವೀಪದ ಗುಡ್ಡವಿದ್ದರೂ ಇರಬಹುದು." ಎಂದನು.

ಹಾಗೆಲ್ಲಾ ಅನುಮಾನಿಸಿಕೊಂಡಿದ್ದರೆ ಯಾವ ಕಾರ್ಯವೂ ನೆರವೇರಲಾರದು. ಮಾಂತ್ರಿಕನು ಕೇಳಿದ ಪ್ರಶ್ನೆಗಳನ್ನೂ ಆ ತಲೆಬುರುಡೆ ಹೇಳಿದ ಉತ್ತರಗಳನ್ನೂ ನೋಡಿದರೆ ಎಲ್ಲಾ ನಂಬುವಂತೆಯೇ ಇದೆ. ಧನದಿಂದ ತುಂಬಿದ ನಾವೆಯನ್ನು ಒಬ್ಬಳು ನಾಗಕನ್ಯೆ ಕಾವಲು ಕಾಯುತ್ತಿದ್ದಾಳೆಂದೂ ಗೊತ್ತಾಗಿದೆ. ಚತುರ್ನೇತ್ರನೆಂಬವನು ಈ ಮಾಂತ್ರಿಕನಿಗೆ ಬದ್ಧ ಶತ್ರುವಾಗಿದ್ದಾನೆಂದೂ ತಿಳಿಯುತ್ತದೆ. ಆ ಧನ ನಾವೆಯ ಸುತ್ತಲೂ ಇರುವ ಇಷ್ಟೆಲ್ಲ ಪ್ರತಿಬಂಧಗಳನ್ನು ತಪ್ಪಿಸಿಕೊಂಡು ನಾವು ಆ ಧನರಾಶಿಯ ನಾವೆಯನ್ನು ವಶಪಡಿಸಿಕೊಳ್ಳಬೇಕು. ಅದು ಹೇಗೆಂಬುದೇ ನಮ್ಮ ಮುಂದಿರುವ ಮುಖ್ಯ ಸಮಸ್ಯೆ." ಎಂದನು ಸಮರಸೇನ.

ಸೈನಿಕರಿಗೇನೋ ಇದು ತೀರಲಾಗದ ಸಮಸ್ಯೆಯೇ ಅನಿಸಿತು. ತಮ್ಮ ನಾಯಕನಿಗೆ ತಕ್ಕ ಸಲಹೆ ಕೊಡಲಿಕ್ಕೆ ಅವರಾರಿಗೂ ಏನೂ ಗೊತ್ತಾಗಲಿಲ್ಲ. ತೋರಿದ್ದನ್ನು ಹೇಳುವ ಧೈರ್ಯವೂ ಇಲ್ಲ. ತುಫಾನಿನ ಘೋರತಾಂಡವದಿಂದ ಸಮುದ್ರಕ್ಕೆ ಹೆದರಿ ಭೂಮಿಗೆ ಬಂದರೆ, ಈಗ ಅದಕ್ಕಿಂತ ಹೆಚ್ಚಿನ ಭಯಂಕರವಾಗಿದೆಯಲ್ಲಾ! ಅವರ ಬುದ್ಧಿಗೆ ಕತ್ತಲೆ ಕವಿದಂತಾಗಿ ಸುಮ್ಮನಿದ್ದುಬಿಟ್ಟರು.






ಸಮರಸೇನನು ಒಮ್ಮೆ ಸುತ್ತಲೂ ನೋಡಿ ಮೌನವಾಗಿ ನಡೆಯ ತೊಡಗಿದನು. ಸೈನಿಕರೂ ಅವನನ್ನು ನಡೆಬೊಂಬೆಗಳ ಹಾಗೆ ಅನುಸರಿಸಿಕೊಂಡು ಹೋದರು. ಮರಗಳ ಬುಡದಲ್ಲಿ ಅವರು ಸ್ವಲ್ಪ ದೂರ ಹೋಗುವಷ್ಟರಲ್ಲಿ ಕಿವಿಗಳು ತೂತಾಗುವಂತೆ ಆಕಾಶದಲ್ಲಿ ಅರಚುವ ಶಬ್ದ ಹೊರಟಿತು! "ಓ! ಚತುರ್ನೇತ್ರಾ! ನೋಡು! ನೋಡೂ! ನರಮಾನವರು! ನರಾಧಮರು! ಪರಾಕ್! ಪರಾಕ್! ಬಹು ಪರಾಕ್!" ಮೇಲಿಂದ ಮೇಲೆ ಹೊರಟಿತು ಇದೇ ಕೂಗು. ಮಧ್ಯೆ ಮಧ್ಯೇ ವಿಕಾರವಾಗಿ ಕಿವಿಯನ್ನು ಹರಿಯುವಂತ ಕಿರಿಚಾಟ!

ಪರೀಕ್ಷಿಸಿ ನೋಡಿದಾಗ ಅದು ಕಗ್ಗಿನ ಗೂಗೆಯ ಧ್ವನಿಯೆಂದು ಗೊತ್ತಾಯಿತು. ಭೀತಾವಹವಾದ ಆದರ ಕೂಗನ್ನು ಕೇಳಿ ಸಮರಸೇನನೂ, ಸೈನಿಕರೂ ಸ್ತಬ್ಧರಾಗಿ ನಿಂತರು. ಪಕ್ಷಿಗಳಿಂದ ಮನುಷ್ಯರ ಹಾಗೆ ಮಾತಾಡಿಸ ಬಲ್ಲಂತಹ ಮಾಂತ್ರಿಕರ ಶಕ್ತಿ ಅದೆಂತಹುದೋ ಎಂದು ನೆನೆಯುತ್ತ ಬೆರಗಾದರು. ಭಯದೊಂದಿಗೆ ಏನೇನೋ ಅನುಮಾನಗಳೂ ಉಂಟಾದುವು. ಈ ಗೂಗೆ ಚತುರ್ನೇತ್ರನೆಂಬವನ ದೂತ ಪಕ್ಷಿಯಾಗಿರಬೇಕು. ಅದೀಗ ತಮ್ಮನ್ನು ನೋಡಿಬಿಟ್ಟಿದೆ. ಇನ್ನೇನು ಗಂಡಾಂತರ ಇದಿರಾಗುವುದೋ!

ಅಷ್ಟರಲ್ಲಿ ಸಮರಸೇನನಿಗೂ ಸೈನಿಕರಿಗೂ ಮತ್ತಿಷ್ಟು ಭ್ರಮೆಯನ್ನುಂಟು ಮಾಡುವಂತೆ, ದೊಡ್ಡದೊಂದು ಮರದ ಮೇಲಿನಿಂದ ಒಂದು ನರವಾನರವು ಅವರ ಮುಂದೆ ಧುಮುಕಿತು.

ಅದರಲ್ಲಿ ಮಾನವ ವಾನರ ಲಕ್ಷಣಗಳು ಸರಿಸಮವಾಗಿದ್ದುವು. ಅದುವರೆಗೆ ಆಕಾಶದಲ್ಲಿ ಹಾರಿಕೊಂಡಿದ್ದ ಕರೀಗೂಗೆ ಆ ನರವಾನರದ ಹೆಗಲಿನ ಮೇಲೆ ಎರಗಿ ಅದರ ಕಿವಿಯಲ್ಲಿ ಏನೋ ರಹಸ್ಯ ಮಾತು ಹೇಳಿತು. ಅದನ್ನು ಅರ್ಥಮಾಡಿಕೊಂಡಂತೆ ನರವಾನರವೂ ತಲೆಯಾಡಿಸಿತು.

ಆ ಮೇಲೆ ನರವಾನರವು ಸಮರಸೇನನನ್ನೂ, ಸೈನಿಕರನ್ನೂ ತಲೆ ಬಗ್ಗಿಸಿ ಪರೀಕ್ಷಿಸುವಂತೆ ನೋಡಿ, ಮರದಿಂದ ನೇತಾಡುವ ಬಳ್ಳಿಗಳನ್ನು ಹಿಡಿದು ನೇತಾಡುತ್ತ, ಒಂದು ಮರದಿಂದ ಇನ್ನೊಂದು ಮರಕ್ಕೆ ಹಾರುತ್ತ ಕ್ಷಣಮಾತ್ರದಲ್ಲಿ ಅದೃಶ್ಯವಾಗಿ ಹೋಯಿತು.

ಸೈನಿಕರಲ್ಲೊಬ್ಬನು ನರವಾನರವು ಕಾಣದೇಹೋದ ದಿಕ್ಕನ್ನೇ ನೋಡುತ್ತ, "ಸೇನಾನೀ ದೊರೆಗಳೇ, ಇನ್ನು ನಾವು ಹಿಂದಿರುಗಿಹೋಗುವುದೇ ಒಳ್ಳೇದು. ಹೆಜ್ಜೆಹೆಜ್ಜೆಗೂ ಭಯವನ್ನು ಹುಟ್ಟಿಸುವಂಥ ಈ ಮಂತ್ರಮಯ ದ್ವೀಪದಲ್ಲಿ ನಾವು ಸಾಧಿಸುವಂಥ ಕೆಲಸ ಯಾವುದೂ ಇರಲಾರದು. ಪಕ್ಷಿಗಳನ್ನೂ ಮೃಗಗಳನ್ನೂ ಚಾಕರಿಮಾಡಲು ಉಪಯೋಗಿಸಿಕೊಳ್ಳುವ ದೊಡ್ಡ ದೊಡ್ಡ ಮಾಂತ್ರಿಕರ ಶಕ್ತಿಗಳ ಮುಂದೆ ನಮ್ಮ ಕತ್ತಿಬಾಣಗಳೆಲ್ಲ ಹುಲ್ಲುಕಡ್ಡಿಗಳಿಗೆ ಸಮಾನವೇ. ಇಲ್ಲಿ ಮೃಗಪಕ್ಷಿಗಳೂ ಮನುಷ್ಯರೂ ಸರಿ ಸಮಾನ ಶಕ್ತಿಶಾಲಿಗಳೇ!" ಎಂದನು.



ಸಮರಸೇನನು ಸೈನಿಕರ ಮಾತುಗಳನ್ನು ಕೇಳಿಯೂ ಕೇಳದವನಂತೆ ಸುಮ್ಮನಿದ್ದನು. ಆ ಕಪ್ಪುಗೂಗೆ ಮರದಕೊಂಬೆಯಲ್ಲಿ ಮತ್ತೆ ಕಾಣಿಸಿತು. ಅದು ತನ್ನ ಕೆಂಡದ ಕಿಡಿಗಳಂತಹ ಕಣ್ಣುಗಳನ್ನು ಆಚೀಚೆ ತಿರುಗಿಸುತ್ತ ಸಮರಸೇನ ಮೊದಲಾದವರನ್ನು ಗಮನಿಸಿ ಕೊಂಡೇ ಇದ್ದಿತು. ಅದಕ್ಕೆ ತಿಳಿಯದಂತೆ ಇನ್ನೇನೂ ಮಾಡಲು ಸಾಧ್ಯವಿಲ್ಲವೆನಿಸಿತು ಸಮರಸೇನನಿಗೆ. ಸೈನಿಕರಿಗಂತೂ ಬಾಯಿಯಲ್ಲಿ ಪಸೆಯೇ ಇಲ್ಲ. ತಮ್ಮ ಸಮಾಧಿ ಬೇಗದಲ್ಲೇ ಬರುವಂತೆ ಕಾಣಿಸು ತ್ತಿತ್ತು ಅವರಿಗೆ.

ಸಮರಸೇನನು ಆ ಗೂಗೆಯ ಕಡೆಗೇ ಒಂದೆರಡು ಕ್ಷಣ ಪರೀಕ್ಷಿಸಿ ನೋಡಿ, ಏನೋ ಉಪಾಯ ಕಂಡವ ನಂತೆ ತಲೆದೂಗುತ್ತ, ಪಕ್ಕದಲ್ಲಿದ್ದ ಸೈನಿಕನಿಂದ ಬಿಲ್ಲಂಬುಗಳನ್ನು ತೆಗೆದುಕೊಂಡು ತಟ್ಟನೆ ಆ ಕರಿಗೂಗೆಯ ಕಡೆಗೆ ಬಾಣದ ಗುರಿಯಿಟ್ಟನು. ಅದನ್ನು ನೋಡಿ ಸೈನಿಕರು ತತ್ತರಿಸಿದರು.

ಒಬ್ಬ ಸೈನಿಕನು ಸಾಹಸದಿಂದ ಬಾಯಿ ತೆರೆದು, "ಬೇಡ ದೊರೆಗಳೇ, ಆ ಮಂತ್ರಶಕ್ತಿಯ ಗೂಗೆಯನ್ನು ಹೊಡೆದರೆ ಅದಕ್ಕೇನೂ ಆಗಲಿಕ್ಕಿಲ್ಲ. ಅದರಿಂದ ಅದರ ಯಜಮಾನನಾದ ಮಾಂತ್ರಿಕನಿಗೆ ನಮ್ಮ ಮೇಲೆ ಇನ್ನಿಷ್ಟು ಕೋಪವೇಳುತ್ತದೆ. ಆಲೋಚಿಸಿರಿ ದೊರೇ! ನಾವಾಗಿ ಕೋಪಕ್ಕೆ ದಾರಿ ತೆಗೆಯ ಬಾರದು." ಎಂದನು.

"ಆ ಸಂಗತಿ ಈಗಲೇ ಸ್ಪಷ್ಟವಾಗಿ ಬಿಡಲಿ!" ಎನ್ನುತ್ತ ಸಮರಸೇನನು ಬಾಣವನ್ನು ಕರಿಗೂಗೆಯ ಮೇಲೆ ಪ್ರಯೋಗಿಸಿಬಿಟ್ಟನು. ಬಾಣವು ರಿವ್ವನೆ ಹೋಗಿ ಗೂಗೆಗೆ ತಾಗಿತು. ಅದು ತಪ್ಪಿಸಿಕೊಳ್ಳುವ ಪ್ರಯತ್ನವೇ ಮಾಡಿದಂತಿಲ್ಲ. ಬಾಣದೇಟಿನಿಂದ ಅದು ಕೆಳಗೆಬಿದ್ದು ವಿಲಿವಿಲಿ ಒದರಾಡುವುದೆಂದು ಕೊಂಡರೆ, ಹಾಗೂ ಆಗಲಿಲ್ಲ. ಯಾವುದೋ ಕಡ್ಡಿ ಗಾಳಿಗೆ ಹಾರಿಬಂದು ತಾಗಿದಂತಾಗಿತ್ತು. ಸೈನಿಕನ ಅನುಮಾನವೇ ನಿಜವಾಯಿತು. ಸಮರಸೇನನು ಆಶ್ಚರ್ಯದಿಂದ ಕೈ ಕಚ್ಚಿಕೊಂಡನು.

ಕರಿಗೂಗೆ ತನ್ನ ಶರೀರಕ್ಕೆ ಚುಚ್ಚಿಕೊಂಡ ಬಾಣ ವನ್ನು ಅಲಕ್ಷ್ಯವಾಗಿ ಕೊಕ್ಕಿನಿಂದ ಹೊರಕ್ಕೆಳೆದು ದೂರಬಿಸುಟು ಖಿಗಖಿಗನೆ ನಕ್ಕಿತು. ಆ ಮೇಲೆ ಕರ್ಣಕಠೋರವಾಗಿ ಒಮ್ಮೆ ಅರಚಿ, "ಎಲವೋ ನರಾಧಮರೇ! ನನ್ನನ್ನು ಕೊಲ್ಲಲು ನೋಡುವಿರಾ? ಮಹಾಶಕ್ತಿವಂತನೆಂದುಕೊಂಡ ಆ ಏಕಾಕ್ಷಿ ಮಾಂತ್ರಿ ಕನೇ ನನ್ನನ್ನು ಏನೂ ಮಾಡಲಾರದೆ ಹೋಗಿದ್ದಾನೆ. ಅವನ ಮುಂದೆ ನೀವೆಷ್ಟರವರು? ಪರದೇಶದ ಹುಲು ಮಾನವರು ನೀವು! ತಡೆಯಿರಿ, ತಡೆಯಿರಿ. ನಮ್ಮ ಚಿತುರ್ನೇತ್ರನು ಬಂದು ನಿಮ್ಮ ನೆತ್ತರು ಹೀರುವ ಶುಭಗಳಿಗೆ ಸಮೀಪಿಸುತ್ತಾ ಇದೆ!" ಎಂದು ಹಂಗಿಸಿತು.

ಅದರ ಮಾತು ಕೇಳುವಾಗ ತಾನೂ ತನ್ನ ಕಡೆಯ ವರೂ ಎಂತಹ ಆಪತ್ತಿನಲ್ಲಿ ಸಿಕ್ಕಿಕೊಂಡಿರುವೆವೆಂಬುದು

ಅರ್ಥವಾಯಿತು ಸಮರಸೇನನಿಗೆ. ಇನ್ನು ನಿಂತಿರುವುದರಲ್ಲಿ ಯಾವ ಅರ್ಥವೂ ಇಲ್ಲ.

ಅವನು ಸೈನಿಕರಿಗೆ ಸನ್ನೆ ಮಾಡಿ ಅಲ್ಲಿಂದ ವೇಗವಾಗಿ ಓಡಲು ತೊಡಗಿದನು. ಸೈನಿಕರೂ ಅಷ್ಟೇ ! ಆದರೆ ಯಾವುದರ ಕಣ್ಣು ತಪ್ಪಿಸಬೇಕೆಂದು ಅವರು ಓಡುವರೋ ಆ ಗೂಗೆ ಅವರನ್ನನುಸರಿಸಿಕೊಂಡೇ ಹಾರುತ್ತ ಅರಚುತ್ತ ಬೆನ್ನು ಹತ್ತಿತ್ತು.

ಬೇಗನೇ ಸಮುದ್ರತೀರವನ್ನು ಸೇರಿ ತಮ್ಮ ಹಡಗನ್ನೇರಿಕೊಂಡು ಆ ಭಯಂಕರ ದ್ವೀಪದಿಂದ ಹೊರಟು ಹೋಗಬೇಕೆಂದು ಸಮರಸೇನನು ನಿಶ್ಚಯಿಸಿದನು. ಆದರೆ ಗೂಗೆಯ ಅರಚಾಟದಿಂದಲೂ, ಯಾವ ಮಾಂತ್ರಿಕನೋ ಬಂದುಬಿಡುವನೆಂಬ ಭಯದಿಂದಲೂ ದಾರಿತಪ್ಪಿ ಅರಣ್ಯದಲ್ಲಿ ಬಹುದೂರ ಓಡಿದರು. ಓಡಿಯೋಡಿ ಕಾಲುನೋವು ಹುಟ್ಟಲು ಒಂದು ಕಡೆ ನಿಂತರು, ಉಸಿರು ಬಿಡುತ್ತಾ!

ಸಮರಸೇನನು ಆಚೀಚೆ ನೋಡಿದನು. ತಾವು ಯಾವ ಸ್ಥಳದಲ್ಲಿ ಹಡಗಿನಿಂದಿಳಿದೆವೋ, ಈಗ ಯಾವ ದಿಕ್ಕಿಗೆ ಬಂದಿದ್ದೇವೋ ಎಂಬುದು ಅವನಿಗೆ ಗೊತ್ತಾಗಲಿಲ್ಲ. ಗೂಗೆಯ ಅರಚಾಟ ಅವನ ತಲೆಯನ್ನೇ ಕೆಡಿಸಿಹಾಕಿತ್ತು.

"ನಾವು ಎಲ್ಲಿಂದ ಎಲ್ಲಿಗೆ ಬಂದೆವೋ ಗೊತ್ತಾಗಲಿಲ್ಲ. ಮುಖ್ಯವಾಗಿ ನಾವೇನೂ ಮಾಡದೆಯೇ ಈ ದ್ವೀಪದಲ್ಲಿರುವ ಯಾವನೋ ಮಾಂತ್ರಿಕನಿಗೆ ವಿರೋಧಿಗಳಾದೆವು. ಈ ಪರಿಸ್ಥಿತಿಯಲ್ಲಿ ನಮ್ಮನ್ನು ಕುಂಡಲಿನೀ ದೇವಿಯ ಹೊರತು ಬೇರೆ ಯಾರೂ ಕಾಪಾಡಲಾರರು" ಎಂದನು ಸಮರಸೇನ.

"ಸೇನಾನೀ ದೊರೆಗಳೇ, ನಾವು ಯಾವ ವಿಧದಿಂದಾರೂ ಈ ಗೂಗೆಯ ಕಣ್ಣಿನಿಂದ ತಪ್ಪಿಸಿಕೊಳ್ಳಲೇಬೇಕು." ಎಂದನೊಬ್ಬ ಸೈನಿಕ.

ಸಮರಸೇನನು ಏನೋ ಹೇಳಬೇಕನ್ನುವಷ್ಟರಲ್ಲಿ, "ಓ ಕಾಲಭುಜಂಗಾ ! ಕಂಕಾಳಾ !" ಎಂದು ಅರಣ್ಯವೆಲ್ಲಾ ಪ್ರತಿಧ್ವನಿಸುವಂತಹ ಶಬ್ದ ಕೇಳಿತು, ಒಕ್ಕಣ್ಣಿನ ಮಂತ್ರವಾದಿಯದು!

ಆ ಶಬ್ದವನ್ನು ಕೇಳುತ್ತಲೇ ಚತುರ್ನೇತ್ರನ ಬಂಟನಾದ ಕರಿಗೂಗೆ ಒಂದು ಆರ್ತನಾದ ಮಾಡಿ ಭರ್ರನೆ ಎತ್ತೋ ಹಾರಿಹೋಯಿತು. ಈ ಒಕ್ಕಣ್ಣಿನ ಮಂತ್ರವಾದಿಯೇ ಹೆಚ್ಚಿನ ಬಲಿಷ್ಠನೆಂದು ಈಗ ಸ್ಪಷ್ಟವಾಯಿತು.

ಅಕಸ್ಮಾತ್ತಾಗಿ ಗೂಗೆಯ ಪೀಡೆ ಕಳೆಯಿತೆಂಬ ಸಮಾಧಾನವಾದರೂ, ಇನ್ನೊಂದು ಕಡೆಯಿಂದ ಕೇಳಿಬಂದ ಏಕಾಕ್ಷಿ ಮಾಂತ್ರಿಕನ ಕಂಠ ಧ್ವನಿ, ಸಮರಸೇನಾದಿಗಳನ್ನು ಹೆದರಿಸಿತು. ಕೂಡಲೇ ಅವರೆಲ್ಲ ಆ ಕಂಠ ಧ್ವನಿಯ ವಿರುದ್ಧ ದಿಕ್ಕನ್ನು ಹಿಡಿದು ಶಕ್ತಿಯಿದ್ದಷ್ಟೂ ವೇಗವಾಗಿ ಓಡತೊಡಗಿದರು. (ಇನ್ನೂ ಇದೆ)






## ೪

[ ಕುಂಡಲಿನೀ ರಾಜ್ಯದ ಸೈನಿಕರು ಧನಾಗಾರವನ್ನು ತುಂಬಿಸಲು ಬೇರೆ ದ್ವೀಪರಾಜ್ಯಗಳ ಮೇಲೆ ದಾಳಿ ಹೊರಟರು. ಸೇನಾಧಿಪತಿ ಸಮರ ಸೇನನು ಧೂಮಕೇತುವಿನ ದುಃಶಕುನವನ್ನೂ ಲಕ್ಷ್ಯ ಮಾಡದೆ, ತುಫಾನಿಗೆ ಸಿಕ್ಕಿ ನಷ್ಟ ಪಟ್ಟು ಆರು ಮಂದಿ ಸೈನಿಕರೊಂದಿಗೆ ಒಂದು ದ್ವೀಪವನ್ನು ಸೇರಿದನು. ಅಲ್ಲಿಯ ಮಾಂತ್ರಿಕ ಮಾನವ ಮೃಗ ಪಕ್ಷಿಗಳಿಗೆ ಹೆದರಿ ಅವರೆಲ್ಲ ಓಡ ತೊಡಗಿದರು ]

ಮಹಾಧೀರನೆನಿಸಿಕೊಂಡ ಸೇನಾಧಿಪತಿ ಸಮರ ಸೇನನೂ, ಸೈನಿಕರೂ ಮಹಾಭೀತಿಯಿಂದ ದಿಕ್ಕು ದೆಸೆ ತಿಳಿಯದೆ ಆ ಅರಣ್ಯದಲ್ಲಿ ಓಡುತ್ತ ಸ್ವಲ್ಪ ದೂರ ಹೋಗಲು ಒಂದು ಗುಡ್ಡವು ಅವರಿಗೆ ಇದಿರಾಯಿತು. ಅಲ್ಲಿ ನಿಂತು ಸುತ್ತಲೂ ಒಮ್ಮೆ ನೋಡಿದರು.

ಭಯಂಕರ ರೂಪದ ವಿಕಾಕ್ಷಿ ಮಾಂತ್ರಿಕನ ಕಂಠ ಸ್ವರವು ಈಗ ಅವರ ಕಿವಿಗೆ ಕೇಳಿಸುತ್ತಿರಲಿಲ್ಲ. ತಾತ್ಕಾಲಿಕವಾದ ಪ್ರಾಣಾಪಾಯದಿಂದ ತಪ್ಪಿದ ಸಂತೋಷವಾದರೂ, ಮುಂದೇನು ಬರುವುದೋ ಎಂಬ ಭಯ ಹಾಗೇ ಇದ್ದಿತು. ತಮ್ಮ ಬೆನ್ನು ಹತ್ತಿದ ಚತುರ್ನೇತ್ರನ ಗೂಢಚಾರಿ ಯಾದ ಕರಿಗೂಗೆಯೂ, ನರವಾನರವೂ ಎಲ್ಲಿ ಹೋದುವೋ ಏನಾದುವೋ ತಿಳಿಯಲಿಲ್ಲ. ಒಟ್ಟಿನ ಮೇಲೆ ಈ ಸ್ಥಳವು ಸ್ವಲ್ಪ ಮಟ್ಟಿಗೆ ಸ್ಥಿಮಿತವನ್ನು ಕೊಡುವ ಹಾಗೆ ತೋರಿತು.

ಆದರೆ ಹೊತ್ತನ್ನು ವ್ಯರ್ಥವಾಗಿ ಕಳೆಯು ವಂತಿಲ್ಲ. ಮುಂದೆ ಮಾಡಬೇಕಾದುದೇನು ? ಹೋಗಬೇಕಾದುದೆಲ್ಲಿಗೆ ? ಈ ಪ್ರಶ್ನೆಗಳು ಅವರ ಮುಂದೆ ಕುಣಿದಾಡುತ್ತಿದ್ದುವು. ಮತ್ತೆ ಏನೋ



ಒಂದು ಅಪಾಯವು ಕಾಣಿಸುವುದರೊಳಗೇ ಈ ಮಾಂತ್ರಿಕ ದ್ವೀಪದಿಂದ ಹೊರಬಿದ್ದು ಬಿಡಬೇಕು. ದ್ವೀಪವನ್ನು ಬಿಟ್ಟುಹೋಗುವುದೆಂದರೆ ಹೇಗೆ ? ತಾವು ಸಮುದ್ರದಲ್ಲಿ ಬಿಟ್ಟಿರುವ ಹಡಗುಗಳು, ದೋಣಿಗಳು ಯಾವ ದಿಕ್ಕಿನಲ್ಲಿವೆ ? ಇಲ್ಲಿ ತಮಗೆ ಏನೇನೋ ಅಪಾಯಗಳು ಇದಿರಾದ ಹಾಗೆ ಹಡಗುಗಳಲ್ಲಿ ಬಿಟ್ಟು ಬಂದ ಸೈನಿಕರಿಗೆ ಎಂತಹ ಅಪಾಯವೂ ಬಂದಿರಲಾರದಷ್ಟೆ ? ಅವರೆಲ್ಲ ಇದ್ದಲ್ಲೇ ಇರುವರಷ್ಟೆ? ಅಸಲು ತಾವು ನಿಲ್ಲಿಸಿಟ್ಟ ಹಡಗುಗಳ ಜಾಗದಿಂದ ಎಷ್ಟು ದೂರದಲ್ಲಿದ್ದೇವೋ ಏನೋ ! ಯಾವ ದಿಕ್ಕಿನಲ್ಲಿದ್ದೇವೋ ?

ದಿಕ್ಕು ತಿಳಿಯಬೇಕೆಂದು ಸಮರಸೇನನು ಅರಣ್ಯವನ್ನೂ ಆಕಾಶವನ್ನೂ ತಲೆ ತಿರುಗಿಸಿ ನೋಡಿದನು. ಎತ್ತ ತಿರುಗಿದರೂ ಚಿಕ್ಕವೂ ದೊಡ್ಡವೂ ಆದ ಗುಡ್ಡಗಳು ; ಆಕಾಶವನ್ನು ಮುಧ್ದಿಸುವ ವೃಕ್ಷಗಳು : ಆ ವೃಕ್ಷಗಳನ್ನು ಸುತ್ತಿಕೊಂಡಿರುವ ಬಳ್ಳಿಗಳು. ಇವುಗಳ ನಡುವೆ ದಿಕ್ಕು ತಿಳಿದುಕೊಳ್ಳುವುದರೊಳಗೆ ಅವನ ತಲೆಯೇ ತಿರುಗತೊಡಗಿತು.

ಸಮರಸೇನನ ತಲೆಯೊಳಗೆ ಚಿಟ್ಟು ಹಿಡಿದಂತಾಗಲು, ಆಕಾಶದ ಒಂದು ಕಡೆಯಲ್ಲಿ ಏನೋ ಪ್ರಕಾಶವು ಹೊರಡುವುದು ಕಂಡಿತು. ನೋಡುತ್ತಿದ್ದಂತೆ ಆಕಾಶದಲ್ಲಿ ಮುಚ್ಚಿ ಹಾಕಿದ್ದ ಮಬ್ಬುಗಳು ತೊಲಗಿ ಸೂರ್ಯನು ಕಾಣಿಸಿದನು. ಆ ಕೂಡಲೇ ಸಮರಸೇನನ ತಲೆ ತಿನ್ನುತ್ತಿದ್ದ ದಿಕ್ಕಿನ ಸಮಸ್ಯೆ ತೊಲಗಿತು.

" ಈ ಮಂತ್ರಗಳ ದ್ವೀಪದ ಪಶ್ಚಿಮ ಭಾಗದಲ್ಲಿ ಈಗ ನಾವಿದ್ದೇವೆ. ಹಾಗಾದರೆ ನಾವು ಹಡಗುಗಳನ್ನೂ ದೋಣಿಗಳನ್ನೂ ಬಿಟ್ಟದ್ದು ಈ ದ್ವೀಪದ ಮೂಡು ಬದಿಯ ಸಮುದ್ರ ತೀರದಲ್ಲಿ. ಆದರೆ ಆ ಮೂಡು ಬದಿಯ ತೀರವು ಎಷ್ಟು ದೂರವೋ ? ತಾವು ಎತ್ತೆತ್ತ ತಿರುಗಿ ಹೇಗೆಹೇಗೆ ಓಡಿದೆವೋ ?

" ಹಾಗಾದರೆ ನಾವೀಗ ಮೂಡು ತೀರಕ್ಕೆ ಹೋಗಬೇಕಷ್ಟೆ ? ಆದಷ್ಟು ಬೇಗ ಹೊರಡುವುದು ಒಳ್ಳೇದಲ್ಲವೆ ? " ಎಂದನೊಬ್ಬ ಸೈನಿಕ.

" ಒಳ್ಳೆಯದೇನೋ ಹೌದು. ಆದರೆ ಅಲ್ಲಿಗೆ ಹೋಗಿ ಸೇರುವುದು ಅಷ್ಟೇನೂ ಸುಲಭವಲ್ಲ. ದಾರಿಯಲ್ಲಿ ಏನೇನು ಅಪಾಯಗಳನ್ನು ಇದಿರಿಸಬೇಕಾಗುತ್ತದೋ ? ಮೂಗಿಗೆ ನೇರಾಗಿ ಹೋಗೋಣವೆಂದರೆ ಅಡ್ಡಡ್ಡವಾಗಿ ದೊಡ್ಡದೊಡ್ಡ ಗುಡ್ಡಗಳಿವೆ. ನಾವು ಎಲ್ಲೆಲ್ಲೋ ಬಳಸಿ ಬಳಸಿ ಇಲ್ಲಿಗೆ ಬಂದಿದ್ದೇವೆ. ಅದರ ಮೇಲೆ ಭಯಂಕರವಾದ ಮೃಗ ಪಕ್ಷಿಗಳಿವೆ. ಅವುಗಳಿಂದ ತಪ್ಪಿಸಿಕೊಂಡು ಮೂಡು ತೀರವನ್ನು ಮುಟ್ಟಿದರೆ ನಾವು ಬದುಕಿದೆವೆನ್ನಬಹುದು !" ಎಂದು ಸಮರಸೇನನು ದೊಡ್ಡದಾಗಿ ಒಂದು ನಿಟ್ಟುಸಿರುಬಿಡುತ್ತ " ದೇವೀ! ನಿನ್ನ ದಯೆ !" ಎಂದನು.

ನಾಯಕನಾದ ಸಮರಸೇನನೇ ಇಷ್ಟೊಂದು ನಿರಾಶೆಯಿಂದ ಮಾತಾಡಿದ ಮೇಲೆ ಸೈನಿಕರೂ ಒಣಗಿದ ಅರಳಿಯೆಲೆಯಂತೆ ಗದಗದಿಸಿ ಹೋದರು. ಅದನ್ನು ಗಮನಿಸಿ ಸಮರಸೇನನು ಕೂಡಲೇ, "ಧೈರ್ಯಂ ಸರ್ವತ್ರ ಸಾಧನಂ! ನಾವು ಪೂರ್ವ ತೀರಕ್ಕೆ ಹೋಗಬೇಕಾದ್ದಂತೂ ನಿಜ. ಹೊರಡೋಣ. ಇದಿರಾಗುವ ಕಷ್ಟಗಳನ್ನು ಇದಿರಿಸೋಣ. ನಮ್ಮ ಕೈಯಲ್ಲಿ ಖಡ್ಗವೂ, ಕುಂಡಲಿನೀದೇವಿಯ ಕೃಪೆಯೂ ಇರುವವರೆಗೆ ನಮಗೆ ಯಾವ ಕಷ್ಟಗಳು ಇದಿರಾದರೂ ಸುರಕ್ಷಿತವಾಗಿ ಪಾರಾಗುತ್ತೇವೆ. ಇಷ್ಟರವರೆಗೆ ಪಾರಾದೆವಲ್ಲಾ? ನಡೆಯಿರಿ! ನನ್ನ ಹಿಂದೆಯೇ ಬನ್ನಿರಿ!" ಎಂದು ಸೈನಿಕರನ್ನು ಪ್ರೋತ್ಸಾಹಗೊಳಿಸಿ ತಾನು ಮುಂದೆ ನಡೆದನು.

ಸ್ವಲ್ಪದೂರ ನಡೆದು ಸಮರಸೇನನು ತಟಕ್ಕನೆ ನಿಂತು. "ಉಷ್! ನಿಲ್ಲಿರಿ!" ಎಂದು ಸೈನಿಕರಿಗೆ ಸನ್ನೆಮಾಡಿದನು. ಅವರ ಇದಿರಿನಲ್ಲಿ ಒಂದು ಭಯಂಕರ ದೃಶ್ಯವು ಪ್ರತ್ಯಕ್ಷವಾಗಿತ್ತು. ಅದು ಎಂತಹ ಧೀರನ ಧೈರ್ಯವನ್ನಾದರೂ ನೀರು ಮಾಡುವಂತಹ ದೃಶ್ಯ!

ದೊಡ್ಡದೊಂದು ಮರದ ಬೊಡ್ಡೆಯಂತಹ ಹೆಬ್ಬಾವು ಬ್ರಹ್ಮಾಂಡವಾದೊಂದು ಮರದಕೊಂಬೆಯಿಂದ ಮೆಲ್ಲಮೆಲ್ಲನೆ ಕೆಳಗೆ ಜಾರುತ್ತಿತ್ತು. ಕೆಳಗೆ ಎರಡು ಚಿರತೆಗಳು ಆ ಹೆಬ್ಬಾವನ್ನು ನೋಡದೆ ಸುಮ್ಮನೆ ಎತ್ತಲೋ ನೋಡುತ್ತ ನಿಂತಿದ್ದುವು.

ಸುಮರಸೇನನೂ ಸೈನಿಕರೂ ನೋಡುತ್ತಿದ್ದಂತೆ, ಆ ಹೆಬ್ಬಾವು ದಭೀರೆಂದು ಒಂದು ಚಿರತೆಯ ಮೇಲೆ ಬಿದ್ದು ಬಾಯಿಯಿಂದ ಅದರ ತಲೆಯನ್ನು ಹಿಡಿದುಕೊಂಡಿತು. ಮಿಂಚಿನ ವೇಗದಲ್ಲಿ ಚಿರತೆಯ ಶರೀರವನ್ನು ಹಗ್ಗದಿಂದ ಬಿಗಿದ ಹಾಗೆ ಸುತ್ತಿ ಹಿಡಿಯಿತು. ಇದನ್ನು ನೋಡಿ ಎರಡನೇ ಚಿರತೆ ಎತ್ತಲೋ ಓಡಿಹೋಯಿತು.






ಆ ಎರಡನೇ ಚಿರತೆ ಬಹುದೂರ ಓಡಿ ಬಿಡಲಿಲ್ಲ. ಅದು ಮತ್ತೆ ಕೆಲವು ಕ್ಷಣಗಳಲ್ಲಿ ಅಲ್ಲಿಗೇ ಬಂದು, ತನ್ನ ಜತೆಯ ಚಿರತೆಯನ್ನು ಹೆಬ್ಬಾವಿನ ಹಿಡಿತದಿಂದ ಬಿಡಿಸಲು ಹೆಣಗಾಡತೊಡಗಿತು. ಅದು ಹೆಬ್ಬಾವಿನೊಂದಿಗೆ ಪಂಜಾಗಳಿಂದ ಹೊಡೆಯುತ್ತಲೂ, ಪರಚುತ್ತಲೂ, ತಿವಿಯುತ್ತಲೂ ಕೋರೆಹಲ್ಲುಗಳಿಂದ ಕಚ್ಚುತ್ತಲೂ, ಮಧ್ಯೆ ಮಧ್ಯೆ ಗರ್ಜಿಸುತ್ತಲೂ ಭಯಂಕರವಾಗಿ ಹೋರಾಡುತ್ತಿತ್ತು.

ಸಮರಸೇನನು ಸೈನಿಕರೊಂದಿಗೆ, "ನೋಡಿದಿರಾ, ಇವುಗಳ ಹೋರಾಟದ ರಭಸವನ್ನು! ನಾವು ತುಂಬಾ ಜಾಗರೂಕತೆಯಲ್ಲಿ ಚಲಿಸಬೇಕು. ಇಂತಹ ಆಪತ್ತುಗಳು ಇನ್ನೆಷ್ಟು ಇದಿರಾಗುವವೋ! ಹೆಜ್ಜೆ ಹೆಜ್ಜೆಗೂ ಎಚ್ಚರವಿರಲಿ!" ಎಂದನು.

ಆಮೇಲೆ ಸೈನಿಕರನ್ನು ಕರೆದುಕೊಂಡು ಸಮರಸೇನನು ಬಳಸು ದಾರಿಯನ್ನು ಹಿಡಿದು ಸಾಗತೊಡಗಿದನು. ಈ ದಾರಿ ನಡೆಯಲು ಅನುಕೂಲವಾಗಿರಲಿಲ್ಲ. ಗುಡ್ಡಗಳ ಕಡೆಯಿಂದ ಬರುವ ಯಾವುದೋ ತೋಡು ತೊರೆಗಳ ನೀರು ಅಲ್ಲೆಲ್ಲಾ ಹರಡಾಡಿ ಕೆಸರುರಾಡಿಯ ನೆಲವಾಗಿತ್ತು. ಅಲ್ಲಲ್ಲಿ ಮೊಣಕಾಲು ಮಟ್ಟದಿಂದ ಸೊಂಟ ಮಟ್ಟದವರೆಗೂ ಬೆಳೆದ ಜೊಂಡು ಹುಲ್ಲು, ಪಾಚಿ, ನೀರುಗಿಡಬಳ್ಳಿಗಳು ದಟ್ಟವಾಗಿ ಬೆಳೆದಿದ್ದುವು. ಅವುಗಳ ನಡುವಿನಲ್ಲಿ ಕಾಲುಗಳನ್ನು ಹೊಗಿಸಿ ಹೊಗಿಸಿ ನಡೆಯಬೇಕಾಗಿತ್ತು. ಅಲ್ಲಲ್ಲಿ ಬಿದಿರು ಪೊದೆಗಳೂ, ಮುಳ್ಳು ಪೊದೆಗಳೂ ಇದ್ದುವು. ಇಂತಹ ಉಪದ್ರವದ ದಾರಿಯಲ್ಲಿ ಸೈನಿಕರು ಸುತ್ತಲೂ ನೋಡುತ್ತ, ಪ್ರಾಣಗಳನ್ನು ಅಂಗೈಯಲ್ಲಿಟ್ಟುಕೊಂಡು ಮುಂದೆ ಮುಂದೆ ಹೋಗುತ್ತಿದ್ದರು. ಮುಂದಿನಿಂದ ಸೇನಾನೀ ಸಮರಸೇನನೇ ನಡೆಯುತ್ತಿದ್ದನು. ಆಗಾಗ ಸೈನಿಕರಿಗೂ ಧೈರ್ಯ ಹೇಳುತ್ತಿದ್ದನು.

ಈ ರೀತಿಯಾಗಿ ಸ್ವಲ್ಪ ದೂರ ಸಾಗಿದ ಮೇಲೆ ಸಮರಸೇನನು ತುಸುನಿಂತು. "ಮುಂದಿನ ದಾರಿ ಪೂರ್ತಿ ಜಲಮಯವಾಗಿ ಕಾಣುತ್ತದೆ. ಅಲ್ಲಲ್ಲಿ ಹೊಂಡ ಗುಂಡಿ ಮಡುಗಳಿದ್ದರೂ ಇರಬಹುದು, ಜಲ ಜಂತುಗಳೂ ಇರಬಹುದು. ಆದರೂ ಕಾಡು ಮೃಗಗಳಿಗೆ ಭಯಪಟ್ಟ ಹಾಗೆ ಜಲಜಂತುಗಳಿಗೆ ಭಯಪಡಬೇಕಾಗಿಲ್ಲ. ಅವು ಸ್ವಾಭಾವಿಕವಾಗಿಯೇ ನಮ್ಮ ಪಾದಗಳ ಸುಳಿವು ತಿಳಿದು ದೂರ ಹೋಗುತ್ತವೆ." ಎಂದನು.

ಸಮರಸೇನನ ಮಾತು ಮುಗಿಯುವಷ್ಟರಲ್ಲೇ ಮುಂದೆ ತುಸುದೂರದಲ್ಲಿದ್ದ ನೀರುಹುಲ್ಲು ಪೊದರುಗಳು ಅಲುಗಾಡ ತೊಡಗಿ, ಅವುಗಳೆಡೆಯಿಂದ ಒಂದು ಖಡ್ಗಮೃಗವು ಪೂರ್ತಿ ಹೊರಬಂದಿತು. ಅದನ್ನು ನೋಡಿ ಸೈನಿಕರು ಯಾವ ಕಡೆಗೆ ಓಡಬೇಕೆಂದು ಗೊತ್ತಾಗದೆ ಅತ್ತಿತ್ತ ನೋಡತೊಡಗಿದರು. ಅವರ ಮನೋ ಭಾವವನ್ನು ಗ್ರಹಿಸಿದ ಸಮರಸೇನನು

ಅವರನ್ನು ಕುರಿತು, "ನಾವು ಓಡಿಹೋಗುವ ಪ್ರಯತ್ನ ಮಾಡಲೇ ಬಾರದು. ಅದು ಇನ್ನಿಷ್ಟು ಆಪತ್ತು! ಈಗ ಧೈರ್ಯವೇ ಶರಣು! ಎಲ್ಲರೂ ಒಬ್ಬರ ಹಿಂದೊಬ್ಬರು ಸಾಲಾಗಿ ನಿಲ್ಲಿರಿ. ಕೈಯಲ್ಲಿ ಕತ್ತಿಗಳು ಸಿದ್ಧವಾಗಿರಲಿ!" ಎಂದನು.

ಖಡ್ಗಮೃಗವು ತಲೆಯೆತ್ತಿ ಒಂದುಸಾರಿ ವಿಕೃತ ಧ್ವನಿಯಿಂದ ಅರಚಿತು. ಅರಚುತ್ತ ತಲೆ ಕುಣಿಸುತ್ತ ಮುಂಗಾಲುಗಳಿಂದ ನೆಲ ಕೆದರತೊಡಗಿತು. ಕೆಸರೂ ಮಣ್ಣೂ ಆಚೀಚೆ ಹಾರಿದುವು. ಸೈನಿಕರು ತಮ್ಮ ಜೀವಗಳ ಭಾರವನ್ನು ಸಮರಸೇನನ ಮೇಲೆ ಹಾಕಿದಂತೆ ಅವನ ಸನ್ನೆಗಳನ್ನೇ ಇದಿರು ನೋಡಿ ಕೊಂಡಿದ್ದರು. ಸಮರಸೇನನು ಏನೋ ಹೇಳಬೇಕೆಂದು ಬಾಯಿ ತೆರೆಯುವಷ್ಟರಲ್ಲಿ, ಖಡ್ಗಮೃಗವು ಅವರ ಕಡೆಗೆ ಹಾರುತ್ತ ಹಾರುತ್ತ ಬಂದಿತು.

ಮುಂದಾಗಿ ನಿಂತಿದ್ದ ಸಮರಸೇನನು ತನ್ನ ಮಹಾ ಖಡ್ಗದಿಂದ ಖಡ್ಗಮೃಗದ ಬೆನ್ನಿನ ಮೇಲೆ ಬಲವಾಗಿ ಹೊಡೆದನು. ಬೇರೆ ಯಾವುದೇ ಮೃಗವಾಗಿರುತ್ತಿದ್ದರೆ ಆ ಪೆಟ್ಟಿಗೆ ಮಗುಚಿ ಬೀಳ ಬೇಕಿತ್ತು. ಆದರೆ ದಪ್ಪ ಚರ್ಮದ ಖಡ್ಗಮೃಗದ ಮೇಲೆ ಆ ಪೆಟ್ಟಿನಿಂದ ಯಾವ ಪರಿಣಾಮವೂ ಆಗಲಿಲ್ಲ. ಆದರೆ ಅದಕ್ಕೆ ನೋವಾಗಿರಬೇಕು. ಆದರಿಂದ ಕೋಪವೇರಿ ಅರಣ್ಯವೆಲ್ಲಾ ಅದುರಿ ಹೋಗುವ ಹಾಗೆ ವಿಕಾರವಾಗಿ ಬೊಬ್ಬಿಡುತ್ತ ಸೈನಿಕರ ಮೇಲೆ ಧುಮುಕಿತು.

ಇಡೀ ಮುಳುಗಿದವನಿಗೆ ಮಳೆ ಚಳಿಗಳ ಭಯ ಹೋಗುವಂತೆ ಈಗ ಸೈನಿನಿಕರು ಸ್ವಲ್ಪವೂ ಹೆದರದೆ, ಸಮರಸೇನನು ಆರಿಸಿದ ನಿಜವಾದ ಧೀರರೇ ಎಂಬಂತೆ ಅದನ್ನು ಹೊಡೆಯು ತೊಡಗಿದರು. ನಾಯಕನ ಧೈರ್ಯ ಸಾಹಸಗಳೂ ಅವರಿಗೆ ಒಳ್ಳೆಯ ಊಟು ಕೊಟ್ಟುವು. ಖಡ್ಗಮೃಗವು ಹೇಗೆ ತಿರುಗಿದರೂ ಪೆಟ್ಟುಗಳೇ! ಅದರ ಹೊಟ್ಟೆಗೂ ಅನೇಕ ಪೆಟ್ಟುಗಳು.

ಕಡೆಗೆ ಖಡ್ಗಮೃಗವು ವಿಪರೀತ ಗಾಯುಗಳಿಂದ ಅರಚುತ್ತ ಬದಿಗೆ ಹೊರಳಿಕೊಂಡು ತುಳ್ಳಾಡ



ತೊಡಗಿತು. ಸಮರಸೇನನು ಸೈನಿಕರೊಂದಿಗೆ, "ಏನೋ ಕುಂಡಲಿನೀದೇವಿಯ ದಯೆಯಿಂದ ಸದ್ಯದ ಗಂಡ ಹಾರಿತು. ಇದರ ಬೊಬ್ಬೆ ಕೇಳಿ ಬೇರೆ ಯಾವುದೋ ಪ್ರಾಣಿಗಳು ಇಲ್ಲಿಗೆ ಬರುವುದಕ್ಕೆ ಮೊದಲೇ ನಾವು ತಪ್ಪಿಸಿಕೊಳ್ಳುವುದು ಒಳ್ಳೆಯದು" ಎಂದು ಅಲ್ಲಿಂದ ಹೊರಡ ತೊಡಗಿದನು. ಸೈನಿಕರೂ ಅವನನ್ನು ಅನುಸರಿಸಿದರು,

ಅಲ್ಲಿಂದ ಅವರು ಸ್ವಲ್ಪ ದೂರ ಹೋಗಿ ಯಾವುದೋ ಕಲ್ಲುಬಂಡೆಗಳ ದಂಡೆಯ ಮೇಲೆ ಹತ್ತಿದರು. ಅವರ ಮುಂದೆ ಶುದ್ಧವಾದ ನೀರಿನ ಮಡುವೊಂದು ಕಾಣಿಸಿತು.

ಅದನ್ನು ನೋಡಿದ ಕೂಡಲೇ ಖಡ್ಗಮೃಗದೊಂದಿಗೆ ಹೋರಾಡಿ ಬಳಲಿ ಹೋಗಿದ್ದ ಸೈನಿಕರಿಗೆ ಆ ಮಡುವಿನಲ್ಲಿ ಇಳಿದು ದಾಹಶಾಂತಿ ಮಾಡಿಕೊಳ್ಳುವ ಆಸೆಯಾಯಿತು. ಅವರಲ್ಲೊಬ್ಬನು, "ಕನ್ನಡಿಯ ಹಾಗೆ ಎಷ್ಟು ಚೆನ್ನಾಗಿದೆ ನೀರು! ಕೆಸರು ರಾಡಿಗಳ ನಡುವೆ ಇದೊಂದು ಅಮೃತ ತಟಾಕ! ಈ ನೀರಿನಲ್ಲಿ ಹಾಯಾಗಿ ಸ್ನಾನ ಮಾಡಿದರೆ ಹೊಸ ಶಕ್ತಿ ಬಂದೀತು!" ಎಂದನು.

ಆ ಮಾತು ಕೇಳಿ ಸಮರಸೇನನು. "ಎಚ್ಚರ! ಇದು ಮಾಂತ್ರಿಕ ದ್ವೀಪವೆಂಬ ಸಂಗತಿಯನ್ನು ಮರೆಯಬೇಡಿರಿ!" ಎಂದು ಎಚ್ಚರಿಸಿದನು.

ಆದರೂ ಇಬ್ಬರು ಸೈನಿಕರು ಧೈರ್ಯದಿಂದ, ಕೆರೆಯಲ್ಲಿ ಮಾಂತ್ರಿಕತ್ವವೇನಿದೆಯೆಂದುಕೊಂಡು, ನೀರಾದರೂ ಕುಡಿಯೋಣವೆಂದು ಆ ಮಡುವಿಗಿಳಿದರು. ಅವರು ನೀರನ್ನು ಮುಟ್ಟಿದ ಮರುಕ್ಷಣದಲ್ಲಿ ಸುತ್ತುಮುತ್ತಲಿನ ನೀರೆಲ್ಲಾ ಕದಲಿತು. ಒಮ್ಮೆಗೇ. ಚೆಂಡುಗಳು ಹಾರಿದಂತೆ ನಾಲ್ಕೈದು ಮೊಸಳೆಗಳು ಅವರ ಮೇಲೆ ಬಿದ್ದುವು. ಅವರು ಕೆಟ್ಟದನಿಯಿಂದ ಕಿರಿಚಿದರು. ಮರುಕ್ಷಣವೇ ದಂಡೆಯಲ್ಲಿ ನಿಂತಿದ್ದ ಸಮರಸೇನನೂ ಸೈನಿಕರೂ ಬಿಲ್ಲಿಗೆ ಬಾಣಗಳನ್ನು ಹೂಡಿ ಅವುಗಳ ಮೇಲೆ ಪ್ರಯೋಗಿಸಿದರೂ ಪ್ರಯೋಜನವಾಗಲಿಲ್ಲ. ಅವರ ಕಣ್ಣೆದಿರಿನಲ್ಲೇ ಆ ನಿರ್ಭಾಗ್ಯದ ಇಬ್ಬರು ಸೈನಿಕರನ್ನೂ



ಮೊಸಳೆಗಳು ಮಡುವಿನ ನೀರಿನೊಳಗೆ ಎಳೆದು ಕೊಂಡು ಹೋದುವು.

ಇದನ್ನು ನೋಡಿ ಎಲ್ಲರ ಉತ್ಸಾಹವೂ ಮುಳುಗಿಹೋಯಿತು. ಸಮರಸೇನನೂ ಉಳಿದ ನಾಲ್ವರು ಸೈನಿಕರೂ ದೀನವದನಗಳಿಂದ ಅಲ್ಲಿಂದ ಹೊರಟರು. ಈಸಾರಿ ಅವರು ಅತ್ಯಂತ ಜಾಗರೂಕತೆಯಿಂದ ನಡೆಯುತ್ತಿದ್ದರು. ಹೀಗೆ ಸ್ವಲ್ಪ ದೂರ ಹೋದಾಗ ಅವರ ಮುಂದೆ ಒಂದು ದೊಡ್ಡ ಸರೋವರವು ಕಂಡಿತು.

"ಇದು ಬಹಳ ದೊಡ್ಡ ಸರೋವರ. ಇದನ್ನು ದಾಟದೆ ಹೋಗಲು ಸಾಧ್ಯವಿಲ್ಲ. ಹೇಗೆ ದಾಟುವುದು ?" ಎಂದು ಸಂದೇಹಪಡುತ್ತ ಸಮರಸೇನನು ಅದರ ಉದ್ದಗಲತೆಯನ್ನು ಅಳೆಯು ವವನಂತೆ ನಿಂತನು.

ನೋಡುತ್ತಿದ್ದಂತೆ ಆ ಸರೋವರದ ತೀರದಲ್ಲಿ ಯಾರೋ ಸ್ನಾನ ಮಾಡುತ್ತಿರುವ ಹಾಗೆ ನೀರು ಕದಲುವುದು ಕಂಡಿತು. ಆದರೆ ಸ್ನಾನಮಾಡುವವರ ಆಕೃತಿ ಮಾತ್ರ ಕಾಣಲೇ ಇಲ್ಲ. ಸರೋವರದ ಮೇಲು ಭಾಗದಲ್ಲಿ ಒಂದು ಮರದ ಕೊಂಬೆ ಕಾಣು ತ್ತಿದ್ದಿತು. ಅದರಲ್ಲೊಂದು ವಿಚಿತ್ರ ! ಆ ಕೊಂಬೆ ಯಿಂದ ಉದ್ದಗಲವಾದ ವಿಚಿತ್ರಾಕೃತಿಯ ಟೋಪಿ ಯೊಂದು ನೇತಾಡುತಿತ್ತು. ಆ ಟೋಪಿಗೆ ಮನು ಷ್ಯನ ಕಣ್ಣುಗಳಂತಹ ಎರಡು ಮಿಂಚುವ ರಂಧ್ರ ಗಳಿದ್ದುವು !

ಈ ವಿಚಿತ್ರ ದೃಶ್ಯವು ಸೈನಿಕರನ್ನು ಭೀತಸ್ತಬ್ಧ ಮಾಡಿತು. ಸಮರಸೇನನು ಆಶ್ಚರ್ಯಪಡುತ್ತ ಇದೆಲ್ಲಾ ಏನೆಂಬ ಪ್ರಶ್ನೆಗೆ ಉತ್ತರ ಹೊಳೆಯದೆ ಮಿಡುಕುತ್ತಿದ್ದನು. ಸರೋವರದ ನೀರು ಇನ್ನೂ ಕದಲಿಕೊಂಡೇ ಇದ್ದಿತು. ಆ ಕದಲಿಕೆಯ ರೀತಿ ನೋಡುವಾಗ ಯಾರೋ ಮಾಯಾವ್ಯಕ್ತಿ ಸ್ನಾನ ಮಾಡುತ್ತಿದ್ದಾನೆಂದು ಸ್ಪಷ್ಟವಾಗಿ ತಿಳಿಯುತ್ತಿದ್ದಿತು.




"ಅಬ್ಬಾ ! ಇಲ್ಲಿಯ ನೀರೂ ಮಂತ್ರಮಯವೇ ಸರಿ" ಎಂದುಕೊಂಡು ಸೈನಿಕರು ತುಂಬ ಹೆದರಿದರು.

ಸಮರಸೇನನೇ ಮೊದಲಾದವರು ಅವರಿಗೆ ತಿಳಿಯದಂತೆಯೇ ಪೊದೆಯ ಮರೆಯಲ್ಲಿ ಅಡಗಿ ರೆಪ್ಪೆ ಬಡಿಯದೆ ಆ ಅದ್ಭುತವನ್ನು ನೋಡು ತ್ತಿದ್ದರು. "ಒಂದು ವೇಳೆ ಇವನು ಆ ಏಕಾಕ್ಷಿ ಮಾಂತ್ರಿಕನಾಗಿದ್ದಾನೋ !" ಎಂಬ ಅನುಮಾನವು ಸಮರಸೇನನ ಮನಸ್ಸಿನಲ್ಲಿ ಎದ್ದಿತು.

ಸ್ವಲ್ಪಹೊತ್ತು ಆಲೋಚನೆ ಮಾಡಿ ನೋಡಿದ ಮೇಲೆ ಇವನು ಏಕಾಕ್ಷಿ ಮಾಂತ್ರಿಕನಲ್ಲವೆಂಬ ನಂಬುಗೆಯುಂಟಾಯಿತು. ಟೋಪಿಯಲ್ಲಿ ಎರಡು ಕಣ್ಣುಗಳಿರುವುದರಿಂದ ಈ ಟೋಪಿಯೂ ಏಕಾಕ್ಷಿಯು ದಲ್ಲವೆಂದಾಗುತ್ತದೆ. ಹಾಗಾದರೆ ಇವನಾರೋ ಹೊಸ ಮಾಯಾ ಮಾಂತ್ರಿಕನಿರಬೇಕು. ಹೀಗೆ ಇನ್ನೊಂದು ಸಂಶಯವೆದ್ದಿತು. ಇದ್ದಕ್ಕಿದ್ದ ಹಾಗೆ ಸರೋವರದಲ್ಲಿ ಏನೋ ಮಾತುಗಳು ಹೊರಟುವು.

ಸ್ನಾನಮಾಡುತ್ತಿರುವ ಮಾಯಾವಿ ಏನೋ ಮಂತ್ರ ಪಠನೆ ಮಾಡುವಂತಿತ್ತು ಅದು. ಆ ಕಂಠಸ್ವರದಲ್ಲಿ ಮೊರಟುತನವೂ ಗಾಂಭೀರ್ಯವೂ ಬೆರೆತುಕೊಂಡಿತ್ತು. ಇವನಾವನೋ ತುಂಬಾ ಅಸಾಧ್ಯದವನೇ ಇರಬೇಕೆನಿಸಿತು ಸಮರಸೇನನಿಗೆ.

ಹೀಗೆ ಅನುಮಾನ ತ್ರಿವಳಿಯೊಳಗಿರುವ ಸಮರಸೇನನಿಗೂ ಸೈನಿಕರಿಗೂ ಇನ್ನಿಷ್ಟು ಭಯಾಂದೋಳನೆಯಾಗುವಂತೆ ಇನ್ನೊಂದು ದೃಶ್ಯ ಪ್ರತ್ಯಕ್ಷವಾಯಿತು. ಸರೋವರದ ತೀರದಲ್ಲಿದ್ದ ಪೊದರುಗಳ ಮರೆಯಿಂದ ಒಂದು ಹಾವು ತಲೆಯನ್ನೆತ್ತಿ ಮೇಲೇಳುವುದನ್ನು ನೋಡಿದರು.

ಆದರೆ ಅದು ಹಾವಲ್ಲ. ಅಪೂರ್ವವಾದೊಂದು ಅದ್ಭುತ ಪ್ರಾಣಿ! ಅದು ಪೊದರಿನೊಳಗಿನಿಂದ ಪೂರ್ತಿ ಹೊರಗೆ ಬಂದು ಎದ್ದು ನಿಂತು ನಡೆಯುವಾಗ ಸಾಧಾರಣ ಆನೆಗಿಂತ ನಾಲ್ಕೈದು ಪಾಲು ದೊಡ್ಡದಾಗಿತ್ತು. ಅಷ್ಟು ದೊಡ್ಡ ಪ್ರಾಣಿಯ ತಲೆ ಮಾತ್ರ ಬಹು ಚಿಕ್ಕದು. ಕುತ್ತಿಗೆ ಹಾವಿನಂತೆ ಉದ್ದ.

ಅದೇನು ಮಾಡುವುದೋ ಎಂದು ಸಮರಸೇನಾದಿಗಳು ರೆಪ್ಪೆ ಬಡಿಯದೆ ನೋಡಿಕೊಂಡಿದ್ದರು. ಅದು ಮೆಲ್ಲನೆ ತನ್ನ ಸಣ್ಣ ತಲೆಯನ್ನು ಸರೋವರದ ಕಡೆಗೆ ಚಾಚಿತು. ಕಣ್ಣಿಗೆ ಕಾಣದ ಮನುಷ್ಯನನ್ನು ಹಿಡಿಯಲಿಕ್ಕೇ ಅದು ಪ್ರಯತ್ನಿಸುತ್ತಿತ್ತೆಂದು ಸ್ಪಷ್ಟವಾಯಿತು. ಹೀಗೆ ಆ ಅದ್ಭುತ ಪ್ರಾಣಿಯ ತಲೆ ನೀರಿನ ಮಟ್ಟದ ಒಂದು ಗಜದಷ್ಟು ಎತ್ತರದಲ್ಲಿ ಸರೋವರದ ಮೇಲೆ ಬಂದುದೇ ತಡ, ಸರೋವರದ ನೀರಿನಿಂದ ಕರ್ಕಶವಾದೊಂದು ದೊಡ್ಡ ಕೂಗು ಹೊರಟಿತು. ಆ ಕೂಗು ಹೊರಟಾಗಲೇ ಕೊಂಬೆಯಲ್ಲಿ ನೇತಾಡುವ ವಿಚಿತ್ರಾಕೃತಿಯ ಹೊಳೆಯುವ ಕಣ್ಣುಗಳ ಟೋಪಿ ಕೆಳಕ್ಕೆ ಜಾರಿತು.

"ಓಹೋ! ನೀನೋ ಮಹೋದರಾ! ನನ್ನನ್ನೇ ಭಕ್ಷಿಸಲು ನೋಡುವಿಯಾ? ಈ ಚತುರ್ನೇತ್ರನನ್ನೇ ನುಂಗಲು ಬಂದೆಯೇನು?" ಎಂದು ಕೂಗಿ ಕೇಳಿದನು. ಅವನ ಕೂಗು ಕಾಡಿನಲ್ಲಿ ಬಹು ದೂರದವರೆಗೆ ಕೇಳಿಸುವಂತಿತ್ತು. ಇನ್ನೊಬ್ಬ ಮಾಂತ್ರಿಕನಾದ ಚತುರ್ನೇತ್ರನನ್ನು ನೋಡಿ ಸಮರಸೇನನೂ ಸೈನಿಕರೂ ತುಂಬಾ ಹೆದರಿದರು. ಹೆದರಿಕೆಯೊಂದು ಅಭ್ಯಾಸದಂತಾಗಿ ಕೂಡಲೇ ಧೈರ್ಯವನ್ನೂ ತಂದುಕೊಂಡರು. ಏಕಾಕ್ಷಿ ಮಾಂತ್ರಿಕನ ಬದ್ಧವಿರೋಧಿಯಾದ ಇವನ ಕಣ್ಣಿಗೆ ಕೂಡಾ ತಾವು ಬೀಳಬಾರದೆಂದುಕೊಂಡರು. ಇಲ್ಲಿಂದ ಹೇಗೆ ತಪ್ಪಿಸಿಕೊಳ್ಳುವುದೆಂದು ಆಲೋಚಿಸುತ್ತ ಸಮರಸೇನನು ಅಡಗಿದ್ದಲ್ಲಿಂದಲೇ ಸುತ್ತಲೂ ನೋಡಿದನು.

(ಇನ್ನೂ ಇದೆ)






೫

[ಏಕಾಕ್ಷಿ ಮಾಂತ್ರಿಕನ ಕಣ್ಣಿಗೆ ಬೀಳದಂತೆ ಸಮರಸೇನನು ತನ್ನ ಸೈನಿಕರೊಂದಿಗೆ ಅರಣ್ಯದಲ್ಲಿ ಸ್ವಲ್ಪದೂರ ಹೋದನು. ಅಲ್ಲಿ ದಾಹಶಾಂತಿಗಾಗಿ ಒಂದು ಮಡುವಿಗಿಳಿದ ಇಬ್ಬರು ಸೈನಿಕರು ಮೊಸಳೆಗಳ ಹೊಟ್ಟೆ ಸೇರಿದರು. ಆ ಮೇಲೆ ಉಳಿದವರು ಮತ್ತಿಷ್ಟು ಮುಂದೆ ಹೋದಾಗ ಒಂದು ಸರಸ್ಸಿನಲ್ಲಿ ಸ್ನಾನಮಾಡುವ ಭಯಂಕರ ಮಂತ್ರವಾದಿ ಚತುರ್ನೇತ್ರನನ್ನು ನೋಡಿದರು.]

ತಾವು ಆ ಮಂತ್ರವಾದಿಯ ಕಣ್ಣಿಗೆ ಬೀಳದಂತೆ ಸರೋವರದ ತೀರದಲ್ಲಿದ್ದ ಪೊದೆಗಳ ಮರೆಯಲ್ಲಿ ಅಡಗಿಕೊಂಡಿದ್ದ ಸಮರಸೇನನಿಗೂ, ಸೈನಿಕರಿಗೂ ಈಗ ಸರೋವರದಲ್ಲಿ ಒಬ್ಬ ಮನುಷ್ಯನು ನಿಂತಿರುವುದು ಸ್ಪಷ್ಟವಾಗಿ ಕಾಣಿಸಿತು. ಕೊಂಬೆಯಿಂದ ಚಾಚಿದ ಆ ಕುಚ್ಚುಟೋಪಿ ಅವನ ತಲೆಯ ಮೇಲಿದ್ದಿತು. ಆ ಟೋಪಿಯ ಮುಂಭಾಗದಲ್ಲಿರುವ ಎರಡು ನೇತ್ರಾಕೃತಿಗಳು ಮಿರಿಮಿರಿ ಕಾಂತಿಯನ್ನು ಹೊರಚೆಲ್ಲುತ್ತಿದ್ದುವು. ಅವುಗಳಿಗೂ ಜೀವವಿದೆಯೇನೋ! ಆ ಎರಡು ಕಣ್ಣುಗಳೂ ಅವನ ಸಹಜವಾದೆರಡು ಕಣ್ಣುಗಳೂ ಅವನ ಚತುರ್ನೇತ್ರನೆಂಬ ಹೆಸರಿಗೆ ಸರಿಹೋಗುತ್ತಿತ್ತು. ಇನ್ನು ಸಮರಸೇನನಿಗೆ ಯಾವ ಸಂಶಯವೂ ಇರ ಲಿಲ್ಲ. ಈ ಅದ್ಭುತ ಮನುಷ್ಯನೇ ಏಕಾಕ್ಷಿ ಮಾಂತ್ರಿಕನ ಬದ್ಧಶತ್ರುವಾದ ಚತುರ್ನೇತ್ರನು! ಅವನಿಗಿಂತ ಇವನು ಸ್ವಲ್ಪವೂ ಕಡಿಮೆಯವನಲ್ಲ! ಇವನನ್ನು ನುಂಗಲು ಬಂದ ಆ ಬ್ರಹ್ಮಾಂಡದ ಶರೀರದ, ಚಿಕ್ಕ ತಲೆಯ ಪ್ರಾಣಿಯನ್ನು ನೋಡಿ ಇವನು ಸ್ವಲ್ಪವೂ ಹೆದರದೆ, "ಏನೋ ಹಂಡೇಹೊಟ್ಟೆಯವನೇ! ಈ ಚತುರ್ನೇತ್ರನನ್ನು ನುಂಗುವಷ್ಟು ಧೈರ್ಯವೇ ನಿನಗೆ? ನನ್ನನ್ನು ನುಂಗಿ ಜೀರ್ಣಿಸಿಕೊಳ್ಳಬಲ್ಲೆಯಾ ಬುದ್ಧಿ



ಯಿಲ್ಲದ ತಲೆಯುವನೇ !" ಎಂದು ಅವಹೇಳನೆಮಾಡಿ ಹೂಂಕರಿಸಿದನು. ಅದು ಸದ್ದಿಲ್ಲದೆ ಎತ್ತಲೋ ಹೊರಟುಹೋಯಿತು. ಈ ಬಗೆಯ ಮಾತಿನಿಂದ ಇವನು ಮಹಾಶಕ್ತಿವಂತನಾಗಿರಬೇಕೆಂದು ಸಮರ ಸೇನನು ಅಂದುಕೊಂಡನು.

ಇಂತಹ ಭಯಂಕರ ಮಾಂತ್ರಿಕನ ಕಣ್ಣುಗಳಿಗೆ ಬೀಳದೆ ಈ ಸರೋವರದ ತೀರದಿಂದ ತಪ್ಪಿಸಿಕೊಂಡು ಹೋಗುವುದು ಹೇಗೆ ? ಸಮರಸೇನನು ಈ ಆಲೋಚನೆಯಲ್ಲಿ ಮುಳುಗಿರಲು, ಒಬ್ಬ ಸೈನಿಕನು ಪಿಸು ದನಿಯಿಂದ, "ಸೇನಾನೀ ದೊರೆಗಳೇ ! ಇವನಿಗೆ ಎಲ್ಲರ ಹಾಗೆ ಎರಡು ಕಣ್ಣುಗಳು ಮಾತ್ರವಲ್ಲದೆ ನಾಲ್ಕು ಕಣ್ಣುಗಳಿವೆ ನೋಡಿದಿರಾ ?" ಎಂದನು ಆಗ ತಾನೇ ಕಂಡುಹಿಡಿದವನಂತೆ.

ಸಮರಸೇನನು ಅವನಿಗೇನೂ ಉತ್ತರ ಕೊಡ ಲಿಲ್ಲ. ಇನ್ನೊಬ್ಬ ಸೈನಿಕನು ಮೊದಲನೆಯವನನ್ನು ಕೋಪದಿಂದ ನೋಡಿ, "ಇದೆಂಥ ಪ್ರಶ್ನೆ ! ಅವನಿಗೆ ನಾಲ್ಕು ಕಣ್ಣುಗಳಿರುವುದು ಸ್ಪಷ್ಟವಾಗಿರುವಾಗ, ಅವನ ಹೆಸರೇ ಚತುರ್ನೇತ್ರ ಎಂದಿರುವಾಗ, ನಿನ್ನ ಪ್ರಶ್ನೆಗೆ ಅರ್ಥವೇ ಇಲ್ಲ !" ಎಂದನು.

ಸಮರಸೇನನು ಸೈನಿಕರ ಮಾತುಗಳನ್ನು ಒಂದು ಕಿವಿಯಿಂದ ಕೇಳುತ್ತ, ಮುಂದಿನ ಕರ್ತವ್ಯವನ್ನು ಕುರಿತು ಆಲೋಚನೆ ಮಾಡುತ್ತಿದ್ದನು. ಸ್ವಲ್ಪ ಹೊತ್ತಿನ ತರುವಾಯ ಅವನು ಸೈನಿಕರ ಕಡೆಗೆ ತಿರುಗಿ, "ಈಗ ನಮಗೆ ಬಂದಿರುವ ಈ ವಿಷಮ ಪರಿಸ್ಥಿತಿಯನ್ನು ಕುರಿತು ಎಷ್ಟರಮಟ್ಟಿಗೆ ಅರ್ಥ ಮಾಡಿಕೊಂಡಿದ್ದೀರೆಂದು ತಿಳಿಯಲು ಕೇಳುತ್ತೇನೆ. ನಾವು ಈ ಮೊದಲು ನೋಡಿದ ಏಕಾಕ್ಷಿ ಮಾಂತ್ರಿಕನ ಬಾಯಿಯಿಂದ ಹೊರಟ ಮಾತುಗಳಿಂದ ಚತುರ್ನೇತ್ರ ನೆಂಬವನು ಅವನ ಬದ್ಧವೈರಿ ಎಂದು ಗೊತ್ತಾಗಿದೆ ಹೌದಾ ?" ಎಂದನು.

ಒಬ್ಬನ ಹೊರತು ಉಳಿದವರು ಹೌದೆಂದು ತಲೆ ಯಾಡಿಸಿದರು. ಅನುಮಾನ ಶೀಲದ ಆ ಸೈನಿಕನು, "ಸೇನಾನೀ ದೊರೆಗಳೇ ! ನೀವು ತಪ್ಪಾಗಿ ತಿಳಿಯ ಬಾರದು. ನಾನು ಒಂದು ಸಣ್ಣ ಸಂಶಯವನ್ನು ಹೇಳಲೇ ?" ಎಂದನು.

"ಏನು ನಿನ್ನ ಸಂಶಯ ? ನಿನಗೆ ಮಾತ್ರವಲ್ಲ, ಉಳಿದವರಿಗೂ ಏನಾದರೂ ಸಂಶಯವಿದ್ದರೆ ಕೇಳ ಬಹುದು. ಇಂತಹ ಆಪತ್ತಿನ ಸಮಯದಲ್ಲಿ ಒಬ್ಬನ ಮಾತಿನ ಮೇಲೆ ಹೋಗುವುದಕ್ಕಿಂತಲೂ ಎಲ್ಲರೂ ಕೂಡಿ ಆಲೋಚಿಸಿ ಒಂದು ನಿಶ್ಚಯಕ್ಕೆ ಬರುವುದೇ ಒಳ್ಳೆಯದು. ಮನಸ್ಸಿನಲ್ಲಿದ್ದುದನ್ನು ಹೇಳಲು ಶಂಕಿಸ ಬೇಕಾಗಿಲ್ಲ" ಎಂದನು ಸಮರಸೇನ.

"ದೊರೆಗಳೇ, ನೀವು ಆ ಏಕಾಕ್ಷಿ ಮಾಂತ್ರಿಕನಿಗೂ ಈ ಚತುರ್ನೇತ್ರನೆಂಬವನಿಗೂ ಇರುವ ದ್ವೇಷವನ್ನು ನಮಗೆ ಅನುಕೂಲವಾಗುವ ಹಾಗೆ ಉಪಯೋಗಿಸಿ ಕೊಳ್ಳಲು ಆಲೋಚಿಸುವ ಹಾಗೆ ನಮಗೆ ತೋರು ತ್ತದೆ. ಹಾಗಿದ್ದರೆ ನನ್ನದೊಂದು ಚಿಕ್ಕ ಸಲಹೆ.

ಸಿಂಹಕ್ಕೂ ಹೆಬ್ಬುಲಿಗೂ ಯಾವಾಗಲೂ ಶತ್ರುತ್ವವೇ. ಆದರೆ ಅವೆರಡೂ ಕ್ರೂರವಾದ ಮೃಗಗಳೆಂಬುದನ್ನು ಮರೆತುಬಿಡಬಾರದು. ನಮಗೆ ಅವೆರಡೂ ಒಂದೇ. ಅಂದರೆ ಎರಡನ್ನೂ ನಂಬುವ ಹಾಗಿಲ್ಲವಷ್ಟೆ?" ಎಂದನು ಸಂದೇಹದ ಸೈನಿಕ.

ಸೈನಿಕನ ಮಾತು ಕೇಳಿ ಸಮರಸೇನನು ಸ್ವಲ್ಪ ಆಲೋಚನೆಗೆ ಬಿದ್ದನು. ಬಳಿಕ ತಲೆಯಾಡಿಸುತ್ತ ಆ ಸೈನಿಕನನ್ನು ನೋಡಿ, "ನಿನ್ನ ಮಾತು ನಿಜವೇ. ಇವರಿಬ್ಬರೂ ಮಹಾಮಂತ್ರವೇತ್ತರು. ದುಷ್ಟಶಕ್ತಿಗಳನ್ನೆಲ್ಲಾ ತಮ್ಮ ಅಂಕೆಯೊಳಗೆ ಇಟ್ಟುಕೊಂಡವರು..." ಎಂದು ಹೇಳುತ್ತಿರಲು, ಸರೋವರದಲ್ಲಿದ್ದ ಚತುರ್ನೇತ್ರನು ತೀರಕ್ಕೆ ಬಂದುದನ್ನು ನೋಡಿ ಮಾತು ನಿಲ್ಲಿಸಿದನು.

ಈಗ ಆ ಮಾಂತ್ರಿಕನ ಪೂರ್ತಿರೂಪ ಕಾಣುತ್ತಿತ್ತು. ಸಾಧಾರಣ ಮನುಷ್ಯರಿಗಿಂತ ಒಂದೂವರೆ ಪಟ್ಟು ಹೆಚ್ಚು ಎತ್ತರವಿದ್ದನು. ರಾಕ್ಷಸನಂಥ ಅವನ ಆಕೃತಿಯನ್ನು ನೋಡಿ ಸಮರಸೇನನೇ ಜುಮುಗುಟ್ಟಿದನೆಂದರೆ ಸೈನಿಕರೆಷ್ಟು ಕಂಪಿಸುತ್ತಿರುವರೋ! ಅವರು ಓಡಿಹೋಗಲು ಕದಲಬೇಕೆಂದಿರುವಾಗ, ಚತುರ್ನೇತ್ರನ ಕಂಚಿನಂತಹ ತೀಕ್ಷ್ಣವಾದ ಕಂಠಸ್ವರವು ಅವರನ್ನೆಲ್ಲ ನಿಂತಲ್ಲೇ ಮರಗಟ್ಟಿಸಿತು. "ಎಲವೋ ಹುಚ್ಚು ಮಂಕುಗಳೇ! ನನಗೇ ಕಣ್ಣುಗಟ್ಟಿಸುವಿರಾ? ಎಷ್ಟು ಮಾತ್ರಕ್ಕೂ ಅದು ನಿಮ್ಮಿಂದ ಸಾಧ್ಯವಿಲ್ಲ. ಈ ಕಾಡಿನಲ್ಲಿರುವ ಮರಗಿಡಗಳೂ, ಗುಡ್ಡಬೆಟ್ಟಗಳೂ, ಹಳ್ಳತಿಟ್ಟುಗಳೂ ಯಾವುದೂ ನನ್ನ ದೃಷ್ಟಿಗೆ ಅಡ್ಡ ಬರುವಂಥವಲ್ಲ! ಯಾವುದನ್ನಾದರೂ ಭೇದಿಸಿ ಹೋಗುವಂಥಾದ್ದು ನನ್ನ ದೃಷ್ಟಿ ಗೊತ್ತೋ? ಈ ದ್ವೀಪದಲ್ಲಿ ಯಾವ ಮೂಲೆಯಲ್ಲಿ ಏನು ನಡೆದರೂ, ನಡೆಯುತ್ತಿದ್ದರೂ ನನಗೆ ಗೊತ್ತಾಗುತ್ತದೆ. ಲೋ ಉಲೂಕಾ! ನರವಾನರಾ!" ಎಂದು ಅರಣ್ಯವೇ ಮಾರ್ದೊಳಗುವ ಹಾಗೆ ಕೂಗಿದನು.





ಆ ಕೂಗು ಕೇಳಿ ಕರಿಗೂಗೆಯೂ ನರವಾನರವೂ ಮರಗಳ ಹಿಂದಿನಿಂದ ವೇಗವಾಗಿ ಬಂದುವು. ನರವಾನರವು ಸಮರಸೇನನ ದಾರಿಗೆ ಅಡ್ಡವಾಗಿ ನಿಂತಿತು. ನರವಾನರವು ಕೈಯಲ್ಲೊಂದು ಮರದ ಕೊಂಬೆಯನ್ನು ಹಿಡಿದು ಬೀಸುತ್ತ ಕಣ್ಣು ತಿರುಗಿಸುತ್ತಿದ್ದಿತು. ಕರಿಗೂಗೆ ಆಕಾಶದಲ್ಲಿ ಚಕ್ರಾಕಾರವಾಗಿ ಹಾರುತ್ತ ಕರ್ಣಕಠೋರವಾಗಿ ಗೂಂಗರಿಸುತ್ತಿದ್ದಿತು.

ಸಮರಸೇನನಿಗೆ ತಾವು ಎಂತಹ ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡೆವೆಂಬ ಸಂಗತಿ ಸ್ಪಷ್ಟವಾಯಿತು. ಇಲ್ಲಿ ತಮ್ಮಲ್ಲಿರುವ ಕತ್ತಿ ಬಿಲ್ಲು ಬಾಣಗಳೆಲ್ಲಾ ಹುಲ್ಲು ಕಡ್ಡಿಗಳಿಗೆ ಸಮಾನ! ಈ ಸಂದರ್ಭದಲ್ಲಿ ಸೈನಿಕರ ಭೀತಿಯನ್ನು ಹೋಗಲಾಡಿಸಬೇಕಾದುದು ಮುಖ್ಯವೆಂದುಕೊಂಡು ಅವನು, "ಹೆದರಬೇಡಿರಿ! ದೇವಿಯ ಅನುಗ್ರಹವಿರುವಾಗ ನಮಗೇನೂ ಅಪಾಯವಾಗದು. ಎಲ್ಲದಕ್ಕೂ ನಮ್ಮ ಮಹಾತಾಯಿ ಕುಂಡಲಿನೀ ದೇವಿಯೇ ಶರಣ್ಯ!" ಎಂದನು.

ಸೈನಿಕರು ಬೆರಗುವಡೆದು ಕಣ್ಣುಮುಚ್ಚಿ ದೇವಿಯನ್ನು ಧ್ಯಾನಿಸತೊಡಗಿದರು. ಚತುರ್ನೇತ್ರನು ಮೆಲ್ಲಮೆಲ್ಲನೆ ಒಂದೊಂದಡಿ ಮುಂದಿಡುತ್ತ, ಮೃದುವಾದ ಕಂಠದಿಂದ, "ಯಾರು ನೀವು ಪಾಪ? ಈ ದ್ವೀಪಕ್ಕೆ ಏಕೆ ಬಂದಿರಿ? ಈ ಮಿಡುಕಾಟಕ್ಕೆಲ್ಲ ಏತಕ್ಕಾಗಿ ಸಿಕ್ಕಿಕೊಂಡಿರಿ?" ಎಂದು ಕೇಳಿದನು.

ಈಗ ಚತುರ್ನೇತ್ರನ ಮುಖದಲ್ಲಿ ಕೋಪವೋ ಕಾಠಿಣ್ಯವೋ ಸ್ವಲ್ಪವೂ ಇರಲಿಲ್ಲ. ಯಥಾರ್ಥವಾದ ಕನಿಕರಭಾವವೇ ಕಾಣುತ್ತಿತ್ತು. ಆ ಭಯಂಕರಾಕಾರದವನ ಮುಖದಿಂದ ಹೊರಟ ಸೌಮ್ಯವಾದ ಮಾತನ್ನು ಕೇಳಿ ಸಮರಸೇನನಿಗೂ, ಸೈನಿಕರಿಗೂ ಹೊರಡುತ್ತಿದ್ದ ಜೀವ ಹಿಂದಿರುಗಿದಂತಾಯಿತು. ಆದರೆ ಚತುರ್ನೇತ್ರನ ಪ್ರಶ್ನೆಗೆ ಯಾವ ಬಗೆಯ ಪ್ರತ್ಯುತ್ತರ ಕೊಟ್ಟರೆ ತಮಗೆ ಕ್ಷೇಮವೋ? ಈ ಪ್ರಶ್ನೆಗೆ ಹೆಚ್ಚು ತಡ ಮಾಡುವಂತೆಯೂ ಇಲ್ಲ. ಸತ್ಯ ಹೇಳುವುದೇ ಒಳ್ಳೆಯದೆಂದು ನಿಶ್ಚಯಿಸಿದನು. ಎಲ್ಲವನ್ನೂ ತಿಳಿಯಬಲ್ಲವನಂತೆ ತೋರುವ ಇವನ ಹತ್ತಿರ ಸುಳ್ಳುಸೊಟ್ಟು ಹೇಳಿದರೆ ಇನ್ನಷ್ಟು ಇರುಕಾಟವಾದೀತು.

"ನಮ್ಮದು ಕುಂಡಲಿನೀ ದ್ವೀಪ. ಸಮುದ್ರಪ್ರಯಾಣ ಮಾಡುತ್ತ, ತುಫಾನಿಗೆ ಸಿಕ್ಕಿ ದಿಕ್ಕುತಪ್ಪಿ ಅಲೆದು ಇಲ್ಲಿಗೆ ಬಂದು ಸೇರಿದ್ದೇವೆ" ಎಂದನು ಸಮರಸೇನ.

ಚತುರ್ನೇತ್ರನು ನಗುವನ್ನು ಸೂಸಿ, "ಹೌದು. ನಿನ್ನ ಮಾತಿನಲ್ಲಿ ನಿಜವೇನೋ ಇದೆ. ಆದರೆ ಸಮುದ್ರಪ್ರಯಾಣ ಮಾಡುವ ಅಗತ್ಯವೇನು ಬಂತೆಂಬ ಸಮಾಚಾರ ಹೇಳಲಿಲ್ಲ. ನಿಜತಾನೇ? ಅದನ್ನು ಮುಚ್ಚಿಡಬೇಕೆಂದಿರುವಿಯಾ?" ಎಂದನು.

ಇನ್ನು ಕೂಲಂಕಷವಾಗಿ ಎಲ್ಲವನ್ನೂ ಹೇಳದಿದ್ದರೆ ಲಾಭವಿಲ್ಲವೆಂದುಕೊಂಡು ಸಮರಸೇನನು ಎಲ್ಲವನ್ನೂ ಹೇಳಿದನು. ತಮ್ಮ ರಾಜನ ಧನಾಗಾರವು ಖಾಲಿ

ಯಾದುದು, ಅದನ್ನು ಮತ್ತೆ ತುಂಬಿಸುವುದಕ್ಕಾಗಿಯೇ ಸೈನಿಕರನ್ನು ಕರೆದುಕೊಂಡು ಸಮುದ್ರ ಪ್ರಯಾಣ ಹೊರಟುದು, ಧೂಮಕೇತುವಿನ ಶಕುನವನ್ನೂ ಲಕ್ಷಿಸದೆ ಅಪಘಾತಕ್ಕೆ ಸಿಕ್ಕಿ ನಷ್ಟವಾದುದು ಹೀಗೆ ಎಲ್ಲವನ್ನೂ ಹೇಳಿದನು.

ಚತುರ್ನೇತ್ರನು ನಗುತ್ತಾ, ತಲೆಯಾಡಿಸುತ್ತಾ ಎಲ್ಲವನ್ನೂ ಕೇಳಿ, "ದೊಡ್ಡ ಕಷ್ಟವೇ ಬಂತು ನಿಮಗೆ. ಧನ ಸಂಗ್ರಹಕ್ಕಾಗಿ ಹೊರಟು, ತುಫಾನಿನ ಹೊಡೆತಕ್ಕೆಸಿಕ್ಕಿ ಈ ಮಾಂತ್ರಿಕ ದ್ವೀಪಕ್ಕೆ ತಳ್ಳಲ್ಪಟ್ಟವರೆಂದಾಯಿತು. ಬೇಕಂತ ಬಂದವರಲ್ಲ. ಚೆನ್ನಾಗಿಯೇ ಇದೆ. ಆದರೆ ನೋಡಪ್ಪಾ. ಇಲ್ಲಿಯೂ ಧನಾಶೆ ಹಿಡಿದ ಒಬ್ಬ ಮಾಂತ್ರಿಕನಿದ್ದಾನೆ. ಅವನ ಧನದ ಆಶೆಗೆ ಇತಿಮಿತಿ ಎಂಬುದಿಲ್ಲ. ಹೀಗೆ ಧನದ ಆಶೆಯವರಾದ ನೀವಿಬ್ಬರೂ ಒಂದಾಗಿ ಬಿಟ್ಟರೆ ಭಲೇ ಸೊಗಸಾಗಿರುತ್ತದೆ!" ಎಂದು ಇನ್ನಷ್ಟು ನಕ್ಕನು.

ಅವನಿಗೆ ಏನು ಉತ್ತರ ಕೊಡಲಿಕ್ಕೂ ಸಮರಸೇನನಿಗೆ ತೋರಲಿಲ್ಲ. "ಅಂದರೆ ನಿಮ್ಮ ಮಾತಿನ ಅರ್ಥ..." ಎಂದು ಅವನು ಏನೋ ಹೇಳಲು ಯತ್ನಿಸುವಾಗ, ಆ ಪ್ರಾಂತವೆಲ್ಲಾ ಪ್ರತಿಧ್ವನಿಸುವಂತೆ ದೊಡ್ಡದೊಂದು ಕಂಠಸ್ವರವು ಹೊರಟಿತು. ಅದು ಈ ಮೊದಲು ಕೇಳಿದ್ದ ಕಂಠಸ್ವರವೇ! ಏಕಾಕ್ಷಿ ಮಾಂತ್ರಿಕನದು. "ಹೇಯ್! ಕಂಕಾಳಾ! ಕಾಲಭುಜಂಗಾ! ಬನ್ನಿರಿ ಹೀಗೆ! ಹುಡುಕಿರಿ ಇಲ್ಲೀ!" ಎನ್ನುತ್ತಿದ್ದನು.

ಆ ಶಬ್ದ ಕೇಳಿ ಹೆದರುವ ಸೈನಿಕರಿಗೆ ಸಮರಸೇನನು ಧೈರ್ಯ ಹೇಳುತ್ತ, "ಹೆದರಿ ಕಿರುಚಿ ಲಾಭವಿಲ್ಲ. ಆ ಪೊದರಿನ ಹಿಂದೆ ಅಡಗಿಕೊಳ್ಳೋಣ, ಬನ್ನಿರಿ" ಎಂದು ಬೇಗಬೇಗನೆ ಹೋಗಿ ಅಡಗಿದನು.

ಸೈನಿಕರು ಎತ್ತರವಾದ ಆ ಪೊದರುಗಳ ಕಡೆಗೇ ಓಡಿದರು. ಅಷ್ಟರಲ್ಲಿ ಏಕಾಕ್ಷಿ ಮಾಂತ್ರಿಕನು ಅಲ್ಲಿಗೇ ಬಂದನು. ಕಾಲ ಸರ್ಪವೂ ಮಾನವ ಕಪಾಲವೂ ಅವನೊಂದಿಗೇ ಚಲಿಸಿಕೊಂಡು ಬರುತ್ತಿದ್ದುವು.




ಚತುರ್ನೇತ್ರನನ್ನು ನೋಡಿದ ಕೂಡಲೇ ಅವನು ರುದ್ರಭೀಕರವಾಗಿ ಒಂದು ಗರ್ಜನೆ ಹಾಕಿ, "ಓಹ್! ಬಹಳ ದಿನಗಳ ಮೇಲೆ ಕಣ್ಣಿಗೆ ಬಿದ್ದೆಯೋ ಭಂಡು ಮಾಂತ್ರಿಕಾ! ಸಾಯಲು ಸಿದ್ಧನಾಗು!" ಎನ್ನುತ್ತಾ ಒರೆಯಿಂದ ಸರ್ರನೆ ಇಪ್ಪುದ್ದದ ಕತ್ತಿಯನ್ನು ಎಳೆದುಕೊಂಡನು.

ಚತುರ್ನೇತ್ರನು ಒಂದಿಷ್ಟೂ ಚಲಿಸದೆ ಏಕಾಕ್ಷಿ ಮಾಂತ್ರಿಕನನ್ನು ಚುರು ಚುರು ನೋಡುತ್ತಾ, "ಓಹೋ! ಏಕಾಕ್ಷೀ ಮಹಾಶಯರೇನು! ಕತ್ತಿಯನ್ನು ಆಡಿಸಿ ಏನೂ ಪ್ರಯೋಜನವಿಲ್ಲ. ನೀವೂ ನಿಮ್ಮ ಕತ್ತಿಯೂ ಹಾವೂ ಕಪಾಲವೂ ದಯಮಾಡಿರಿ ಹೀಗೆ!" ಎಂದನು ಗೇಲಿಯಾಗಿ ನಗುತ್ತಾ.

ಏಕಾಕ್ಷಿ ಮಾಂತ್ರಿಕನು ತನ್ನ ಒಕ್ಕಣ್ಣನ್ನು ಇಷ್ಟಗಲ ತೆರೆದು ಏನೋ ಹೇಳಲು ಬಾಯಿ ತೆರೆಯಲು, ಚತುರ್ನೇತ್ರನು ದೊಡ್ಡ ಧ್ವನಿಯಿಂದ, "ನರವಾನರಾ! ಉಲೂಕಾ!" ಎಂದು ಕೂಗಿದನು. ಆ ಕೂಡಲೇ

"ಗೂಂ" ಎನ್ನುತ್ತ ಕರಿಗೂಗೆಯೂ, ಕಿರ್ರನೆ ಕೂಗುತ್ತ ನರವಾನರವೂ ಅಲ್ಲಿಗೆ ಬಂದುವು. ಅವುಗಳನ್ನು ನೋಡಿ ಏಕಾಕ್ಷಿ ಮಾಂತ್ರಿಕನು ಒಂದಡಿ ಹಿಂದಿಟ್ಟನು. ಏಕಾಕ್ಷಿ ಹೆದರಿದನೆಂಬುದನ್ನು ಅರಿತು ಚತುರ್ನೇತ್ರನು "ಎಲೋ ಉಲೂಕೇಶ್ವರಾ! ಈ ದುಷ್ಟ ಮತ್ತೆ ಬಂದಿದ್ದಾನೆ ನೋಡು! ಇವನ ಒಂದು ಕಣ್ಣಿನ ರುಚಿ ಈ ಮೊದಲೇ ನೋಡಿದ್ದೀ. ಈಗ ಅವನ ಎರಡನೇ ಕಣ್ಣನ್ನು ಕೂಡಾ ಕಿತ್ತು ರುಚಿ ನೋಡು! ತಾನಾಗಿಯೇ ಕೊಡಲು ಬಂದಿದ್ದಾನೆ" ಎಂದನು.

ಮರು ಕ್ಷಣವೇ ಕರಿಗೂಗೆ ಏಕಾಕ್ಷಿ ಮಾಂತ್ರಿಕನ ಕಡೆಗೆ ಹಾರಿತು. ಏಕಾಕ್ಷಿ ಗಾಬರಿಯಿಂದ ಸ್ವರವು ತಬ್ಬಿಬ್ಬಾದಂತೆ, "ಹೋಯ್! ಕಂಟಾಳಾ! ಕಂಪಾಲಾ! ಹೊಡೆಯೋ! ಗುದ್ದೋ" ಎಂದು ಒಂದೇ ಸಮನೆ ಕೂಗಿದನು. ಅವನೊಂದಿಗೆ ಆಕಾಶದಲ್ಲಿ ಚಲಿಸುವ ಮನುಷ್ಯಕಪಾಲವು ತನ್ನ ಬೊಚ್ಚು ಬಾಯಿಯನ್ನು ಕದಲಿಸುತ್ತ ಮುಂದೆ ಬಂದು ಕರಿಗೂಗೆಯ ಮೇಲೆ ತಾಗಿತು.

ಅದನ್ನು ನೋಡಿ ಏಕಾಕ್ಷಿ ಕತ್ತಿಯನ್ನು ಕುಣಿಸುತ್ತ ಉತ್ಸಾಹದಿಂದ ಗಟ್ಟಿಯಾಗಿ ನಕ್ಕನು. ಚತುರ್ನೇತ್ರನು ಅತ್ಯುಗ್ರನಾಗಿ "ನರವಾನರಾ!" ಎಂದು ಕೂಗಿದನು. ನರವಾನರವು ಒಮ್ಮೆಗೇ ಬಂಡೆಬಿದ್ದ ಹಾಗೆ ಏಕಾಕ್ಷಿಯ ಕಡೆಗೆ ಹಾರಿತು. "ಕಾಲಭುಜಂಗಾ!" ಎಂದು ಕೂಗಿ ಏಕಾಕ್ಷಿ ಹಿಂದೆ ಹಾರಿದನು. ಆಗ ಸರ್ಪವು ಭುಸ್ಸೆಂದು ಅಷ್ಟೆತ್ತರ ಹಾರಿ ನರವಾನರಕ್ಕೆ ಅಡ್ಡ ನಿಂತು ಜಡೆಯೆತ್ತಿ ಹೊಡೆಯಿತು. ನರವಾನರವೂ ಮಹಾ ಸರ್ಪವೂ ಒಂದರ ಮೇಲೊಂದು ಬಿದ್ದು ಹೊಡೆದಾಡ ತೊಡಗಿದುವು. ಆಕಾಶದಲ್ಲಿ ಗೂಗೆ, ತಲೆ ಬುರುಡೆಗಳ ಜಗಳ, ತಾಕಲಾಟ!

ಸಮರಸೇನನೂ ಸೈನಿಕರೂ ಪೊದರುಗಳ ಹಿಂದೆ ಅಡಗಿ ಆ ವಿಲಕ್ಷಣ ಹೋರಾಟವನ್ನು ನೋಡ ತೊಡಗಿದರು. "ಸಮಾನ ಉಜ್ಜಿಗಳೆಂದರೆ ಹೀಗಿರ




ಬೇಕು!" ಎಂದನು ಒಬ್ಬ ಸೈನಿಕ. "ಪುಣ್ಯಕಾಲ! ಇವರ ಮುಂದೆ ನಾವು ಅಲ್ಪ ಜೀವಿಗಳಾದುದರಿಂದ ಬದುಕಿಕೊಂಡಿದ್ದೇವೆ!" ಎಂದನು ಸಮರಸೇನ.

ಏಕಾಕ್ಷಿ ಮಾಂತ್ರಿಕನ ಭೃತ್ಯರಿಗೂ, ಚತುರ್ನೇತ್ರ ಮಾಂತ್ರಿಕನ ಭೃತ್ಯರಿಗೂ ದೊಡ್ಡ ಯುದ್ಧವು ನೆಲದಲ್ಲಿಯೂ ಬಾನಿನಲ್ಲಿಯೂ ಸ್ವಲ್ಪ ಹೊತ್ತು ನಡೆಯಿತು. ಮಾನವಕಪಾಲವು ತನ್ನ ಬೋಳು ಬಾಯಿಯಿಂದ ಕರಿಗೂಗೆಯನ್ನು ಆಗಾಗ ಹಿಡಿದುಕೊಳ್ಳುತ್ತಿತ್ತು. ಗೂಗೆ ತಪ್ಪಿಸಿಕೊಳ್ಳುತ್ತಿತ್ತು. ನರವಾನರವನ್ನು ತನ್ನ ಶರೀರದಿಂದ ಸುತ್ತಿಬಿಗಿಯಲು ಕಾಲಭುಜಂಗವು ಪ್ರಯತ್ನಿಸುತ್ತಿತ್ತು.

ಈ ಹೋರಾಟವು ಬೇಗದಲ್ಲಿ ಮುಗಿಯುವಂತಹುದಲ್ಲವೆಂದು ಇಬ್ಬರಿಗೂ ಗೊತ್ತಿತ್ತು. ತಮ್ಮ ಬಂಟರ ಹೋರಾಟ ನೋಡುತ್ತ, ಇಬ್ಬರೂ ಮಂತ್ರವನ್ನು ಗುಣಗುಣಿಸುತ್ತ. "ಹಾಗೆ ಹಿಡಿ! ಬಿಡಬೇಡಾ! ಜಜ್ಜೋ! ಬಿಡ ಬಿಡ್ಬೇ ಅಪ್ಪಳಿಸು!" ಎಂದು

ಪ್ರೋತ್ಸಾಹ ಕೊಡುತ್ತ ನಿಂತಿದ್ದರು ಇಬ್ಬರೂ. ಇದ್ದಕ್ಕಿದ್ದ ಹಾಗೆ ಚತುರ್ನೇತ್ರನು ಒಂದು ಗರ್ಜನೆ ಹಾಕಿ, ತನ್ನ ಟೋಪಿಯನ್ನು ಮೇಲೆತ್ತಿ, "ಓಂ ಹ್ರೀಂ ಹ್ರಾಂ" ಎನ್ನುತ್ತ ಅದೃಶ್ಯನಾದನು. ಆ ಕೂಡಲೇ ಕರಿಗೂಗೆಯೂ ನರವಾನರವೂ ಮಾಯವಾಗಿ ಹೋದುವು.

ಏಕಾಕ್ಷಿ ಮಾಂತ್ರಿಕನು ಮುಖವನ್ನು ಗಂಭೀರ ಮಾಡಿಕೊಂಡು, "ಛೀ! ಛೀ! ಹೇಡಿ! ಪುಕ್ಕ! ಅದೃಶ್ಯನಾದೆಯೇನು? ಎಷ್ಟು ಕಾಲ ಹೀಗೆ ತಪ್ಪಿಸಿಕೊಂಡು ತಿರುಗುವಿಯೊ ನೋಡುತ್ತೇನೆ." ಎಂದು ಹೂಂಕರಿಸಿದನು.

ಒಂದು ನಿಮಿಷದವರೆಗೆ ಏಕಾಕ್ಷಿ ಏನೋ ಆಲೋಚಿಸುತ್ತ ಸುಮ್ಮನಿದ್ದು, ತಾನು ಅಲ್ಲಿಗೆ ಬರುವಾಗ ಕಣ್ಣಿಗೆ ಬಿದ್ದ ಮನುಷ್ಯರು ಎತ್ತ ಹೋದರೆಂದು ಸುತ್ತಲೂ ನೋಡಿದನು. ಪೊದೆಗಳ ಮರೆಯಲ್ಲಿ ಅಡಗಿದ್ದವರು ಅವನ ಕಣ್ಣಿಗೆ ಬೀಳಲಿಲ್ಲ.

ಅವನು ಗಟ್ಟಿಯಾಗಿ ಒಂದು ಸಾರಿ ಹಲ್ಲು ಮಸೆದು, ಚತುರ್ನೇತ್ರನ ಭಟ ಪ್ರಾಣಿಗಳೊಂದಿಗೆ ಹೋರಾಡಿ ಬಸವಳಿದು ಹೋದ ತನ್ನ ಸರ್ಪವನ್ನೂ, ಕಪಾಲವನ್ನೂ ಮುಟ್ಟಿತಟ್ಟಿ ತಡವಿ ಸಮಾಧಾನ ಪಡಿಸಿದನು. ತಳತಳಿಸುವ ತನ್ನ ಕತ್ತಿಯನ್ನು ಆಡಿಸುತ್ತಾ ಮರಗಳ ಕೊಂಬೆಗಳ ಕಡೆಗೆ ನೋಡಿದನು. ಇನ್ನೂ ಅವನಿಗೆ ಕರಿಗೂಗೆಯ ಭಯ ಹೋಗಲಿಲ್ಲ. ಅದು ಹಿಂದೆ ಒಂದು ಸಾರಿ ಅವನ ಕಣ್ಣನ್ನು ಬಲವಾದ ತನ್ನ ಮೂಗಿನಿಂದ ಕುಕ್ಕಿ ಎತ್ತಿ ಹಾಕಿತ್ತು. ಆ ಗೂಗೆಯ ಶಬ್ದ ಕೇಳಿದರೆ ಆ ಮಾಂತ್ರಿಕನಿಗೆ ಭಯದಿಂದ ಮೈನವಿರೇಳುತ್ತಿದ್ದಿತು.

ತರುವಾಯ ಏಕಾಕ್ಷಿ ಮಾಂತ್ರಿಕನು ಕಪಾಲವನ್ನೂ ಕಾಲಭುಜಂಗವನ್ನೂ ಕರೆದುಕೊಂಡು ಅಲ್ಲಿಂದ ಹೊರಟು ಹೋದನು. ಭಯನಿವಾರಣೆಯಾದಂತೆ, ಸಮರಸೇನನೂ, ಸೈನಿಕರೂ ಪೊದರಿನ ಮರೆಯಿಂದ ಹೊರಗೆ ಬಂದರು.

ಮತ್ತೆ ಸಮರಸೇನನು ಸೈನಿಕರನ್ನು ಕರೆದುಕೊಂಡು ಪೂರ್ವ ತೀರದಲ್ಲಿರುವ ತಮ್ಮ ಹಡಗಿನ ಕಡೆಗೆ ಹೋಗಲು ಹೊರಟನು. ಅವನು ನಾಲ್ಕಾರು ಅಡಿಗಳನ್ನು ತೆಗೆದಿರಬಹುದು; ಅಷ್ಟರಲ್ಲಿ ಭೂಮಿ ನಡುಗುವ ಹಾಗೆ ಸಿಡಿಲಿನಂತಹ ಶಬ್ದ ಹೊರಡ ತೊಡಗಿತು. ಸಮರ ಸೇನಾದಿಗಳು ಬೆಚ್ಚರ ಬಿದ್ದು ಆಕಾಶದ ಕಡೆಗೆ ನೋಡಿದರು. ಸಮೀಪದಲ್ಲಿದ್ದ ಪರ್ವತದ ಮೇಲಿಂದ ಅಗ್ನಿದ್ರಾವಕಗಳೂ, ಜ್ವಾಲೆಗಳೂ ಬೆಂಕಿಯ ಕಿಡಿಗಳೂ ಹೊರಡುತ್ತಿದ್ದುವು. ಕರ್ರಗಿನ ಹೊಗೆಯಿಂದ ಆಕಾಶವು ಕರ್ರಗಾಗುತ್ತಿದ್ದಿತು. ಸಮರ ಸೇನ ಮೊದಲಾದವರು ನಿಂತಲ್ಲೇ ನಿಂತು ಆ ಅಗ್ನಿಪರ್ವತದ ಜ್ವಾಲೆಯನ್ನೇ ನೋಡುತ್ತಿದ್ದರು. —(ಇನ್ನೂ ಇದೆ)






## ೬

[ಸೇನಾಧಿಪತಿ ಸಮರಸೇನನೂ, ಸೈನಿಕರೂ ಅರಣ್ಯದಲ್ಲಿ ಮಹಾ ಮಾಂತ್ರಿಕ ಚತುರ್ನೇತ್ರನ ಕಣ್ಣಿಗೆ ಬಿದ್ದರು. ಅವನು ಅವರೊಂದಿಗೆ ಮಾತಾಡುವಾಗಲೇ ಅವನ ಶತ್ರು ಏಕಾಕ್ಷಿ ಮಾಂತ್ರಿಕನು ಬಂದನು. ಅವರಿಬ್ಬರೂ ಯುದ್ಧ ಮಾಡುತ್ತಿದ್ದಾಗ, ಚತುರ್ನೇತ್ರನು ಮಾಯವಾದನು. ಏಕಾಕ್ಷಿಯೂ ಹೊರಟು ಹೋದನು. ಅಷ್ಟರಲ್ಲಿ ಸಮೀಪ ದಲ್ಲಿದ್ದ ಅಗ್ನಿಪರ್ವತವು ಸಿಡಿಯಿತು]

ಅಕಸ್ಮಾತ್ತಾಗಿ ಸಿಡಿದುಕ್ಕಿ ಚಿಮ್ಮುವ ಅಗ್ನಿಪರ್ವತ ವನ್ನು ನೋಡಿ, ಸಮರಸೇನನೂ ಸೈನಿಕರೂ ಭಯ ಭ್ರಾಂತರಾದರು. ಅಗ್ನಿಪರ್ವತದಿಂದ ಮುದ್ದೆ ಮುದ್ದೆ ಯಾಗಿ, ಕೆಂಗರಿಬಣ್ಣದ ಹೊಗೆಯೂ, ಅದರೊಳಗಿ ನಿಂದ ಆಡಿಗಡಿಗೆ ಚಿಮ್ಮುವ ಬೆಂಕಿಯ ಕೆನ್ನಾಲಗೆ ಗಳಂತಹ ಜ್ವಾಲೆಗಳೂ, ಕಣ್ಣುಗಳನ್ನು ಚುಚ್ಚುವಂತೆ ಚಿಮ್ಮುವ ಕಿಡಿರಾಶಿಗಳೂ ಅವರನ್ನು ಎತ್ತಲೂ ಕದಲ ದಂತೆ ನಿಲ್ಲಿಸಿ ಬಿಟ್ಟುವು. ಬರಬರುತ್ತ ಆ ಸುತ್ತು ಮುತ್ತಲಿನ ಪ್ರದೇಶವೆಲ್ಲಾ ಹೊಗೆಯಿಂದ ತುಂಬಿ ಹೋಯಿತು. ಬಡಬಡಿಕೆ ಗುಡುಗುಡಿಕೆ ಶಬ್ದಗಳೂ, ಭೋರೆಂಬ ಎಲ್ಲೆಲ್ಲಿಯ ಮೃಗಪಕ್ಷಿಗಳ ಆರ್ತಾಲಾಪವೂ ಒಟ್ಟು ಸೇರಿ ಯಾವುದೋ ಪ್ರಳಯವಾಗುವಂತೆ ತೋರುತಿತ್ತು.

ಸಮರಸೇನನು ಹೋಗಬೇಕಾಗಿದ್ದ ದಿಕ್ಕಿನಲ್ಲಿಯೇ ಅಗ್ನಿಪರ್ವತದ ಜ್ವಾಲಾ ಮುಖಿ ಸಿಡಿಯಬೇಕೆ? ಧೀರ ಸಮರಸೇನನು ಕುಂಡಲಿನೀ ದೇವಿಯನ್ನು ನೆನೆದನು. ಇಲ್ಲಿ ಮಂತ್ರವಾದಿಗಳ ಗೊಡವೆಯಿಂದ ತಾವು ತಡ ಮಾಡಿದುದರಿಂದಲೇ ಬದುಕಿ ಉಳಿ ದಿರುವೆವೆನಿಸಿತು. ಇಲ್ಲದಿದ್ದರೆ ಇಷ್ಟು ಹೊತ್ತಿಗೆ ತಾವೆಲ್ಲಾ ಆ ಜ್ವಾಲಾಮುಖೀ ಬೆಟ್ಟದ ಸಮೀಪದಲ್ಲಿದ್ದು




ಕರಟಿ ಸಾಯುತ್ತಿದ್ದೆವಲ್ಲಾ! ಅಂತೂ ಬದುಕಿ ಉಳಿದಿರುವ ತಾವು ಇನ್ನು ಮೂಡುತೀರವನ್ನು ಸೇರುವ ಬಗೆ ಹೇಗೆ? ಅದಕ್ಕೆ ಬೇರೆದಾರಿಯೇ ಹಿಡಿಯಬೇಕಾಯಿತು. ಅಂತಲೇ ಸಮರಸೇನನು, ಮಾತಾಡುವ ಶಕ್ತಿಯನ್ನು ಕಳೆದುಕೊಂಡವನಂತೆ ಹಿಂದಿರುಗಿ ನಡೆಯಲಾರಂಭಿಸಿದನು. ಅವನ ಜತೆಗಾರರಾದ ಸೈನಿಕರು ಕೂಡಾ ಭಯ ಕಂಪಿತರಾಗಿ ಯಾವ ಮಾತೂ ಆಡದೆ ಅವನ ಹಿಂದೆಯೇ ಕಾಲುತೆಗೆದಿಡತೊಡಗಿದರು. ಅವರು ಈಗ ತಮಗರಿಯದಂತೆಯೇ ಪಶ್ಚಿಮದಿಕ್ಕನ್ನು ಹಿಡಿದು ನಡೆಯುತ್ತಿದ್ದರು. ಅಗ್ನಿ ಪರ್ವತದಿಂದ ಹೊರಡುವ ಘಾತಗಳಿಂದ ತಪ್ಪಿಸಿಕೊಳ್ಳಲು ಆ ದಿಕ್ಕೇ ಶರಣ್ಯವಾಗಿತ್ತು. ಸ್ವಲ್ಪದೂರ ನಡೆಯುವಾಗ, ಸಮರಸೇನನಿಗೆ. ತಾವು ನಡೆಯುವ ದಿಕ್ಕು ಗೊತ್ತಾದರೂ, ಆಚೆಗೋ ಈಚೆಗೋ ತಿರುಗುವ ಗೊಡವೆಗೆ ಹೋಗಲಿಲ್ಲ. ಮೂಡು ಬದಿಯಲ್ಲಿ ತಾವು ಬಿಟ್ಟು ಬಂದ ಹಡಗುಗಳಿಗೆ ಇನ್ನಿಷ್ಟು ದೂರವಾಗುವುದನ್ನು ನೆನೆದು ಸಮರಸೇನನು ಕಸಿವಿಸಿಗೊಂಡನು. ಬೇರೆ ದಿಕ್ಕುಗಳೆಲ್ಲವೂ ಹೊಗೆಯಿಂದ ಕಪ್ಪು ಕಪ್ಪಾಗಿದ್ದುವು. ಈ ಸಂದರ್ಭದಲ್ಲಿ ಮಾಂತ್ರಿಕರು ಮತ್ತೆ ತಗಲಿದರೆ ಏನುಗತಿಯೋ? ಅದರ ಮೇಲೆ ಹೆದರಿ ಓಡುತ್ತಿರುವ ಕ್ರೂರ ಮೃಗಗಳ ಭಯಬೇರೆ! ಅಂತೂ ತಮ್ಮ ಹಡಗುಗಳ ಬಳಿಗೆ ಹೋಗಿ ಸೇರುವ ಆಶೆ ತಪ್ಪಿದಂತೆಯೇ ಸರಿ! ಜ್ವಾಲಾಮುಖಿಯ ಘಾತದಿಂದ ಸಮುದ್ರವೂ ಉಕ್ಕಿ, ಹಡಗುಗಳನ್ನು ಎತ್ತಾದರೂ ಒಯ್ದರೂ ಒಯ್ದಿರಬಹುದು. ಹಾಗಾಗದಿರಲಿ!

ದಾರಿಯಾದರೂ ಎಲ್ಲಿದೆ? ಗುಂಪುಗುಂಪಾಗಿ ಬೆಳೆದ ಮರಗಿಡಪೊದರುಗಳ ನಡುವೆ ದಾರಿ ಮಾಡಿಕೊಂಡು ನಡೆಯುತ್ತಿದ್ದರು. ಅಲ್ಲಲ್ಲಿ ಹಳ್ಳ ಪ್ರಾಂತಗಳಿಗೆ ಜ್ವಾಲಾಮುಖಿಯೊಳಗಿನಿಂದ ಕಲ್ಲುಗಳು ಕರಗಿದ ಲಾವಾರಸವು ಬಿಸಿಬಿಸಿ ಹೊಗೆಯನ್ನು ಕಾರಿಕೊಂಡು ಪ್ರವಹಿಸುವುದು ಕಾಣುತ್ತಿತ್ತು. ನಿರ್ಭಾಗ್ಯ ಮೃಗ ಪಕ್ಷಿಗಳು ಅದಕ್ಕೆ ಬಲಿಯಾಗುತ್ತಿದ್ದುವು. ಜೀವ ಉಳಿಸಿಕೊಂಡ ಮೃಗಗಳು ಅರಚುತ್ತ ಕಿರುಚುತ್ತ ಓಡುತ್ತಿದ್ದುವು.

ಒಂದು ಕಡೆಯಲ್ಲಿ ಅವಸರದ ಅಪಾಯವನ್ನು ದಾಟಿ ಬಂದಂತೆನಿಸಿ ಸಮರಸೇನನು ನಿಂತು ಸುತ್ತಲೂ ನೋಡಿದನು. ದೂರದಿಂದ ಉಕ್ಕಿಬರುವ ಸಳಸಳನೆ ಕುದಿಯುವ ದ್ರವವು ದಾಟಲು ಅಸಾಧ್ಯವಾದ ನದಿಯಾಗುವುದಕ್ಕೆ ಮೊದಲೇ ಯಾವುದಾದರೊಂದು ಎತ್ತರವಾದ ಪ್ರದೇಶವನ್ನು ಸೇರುವುದು ಒಳ್ಳೆಯದೆಂದು ಅವನಿಗೆ ತೋರಿತು. ಇಲ್ಲದಿದ್ದರೆ ಶಿಲಾದ್ರವವು ತಮ್ಮನ್ನು ಮುಳುಗಿಸಬಹುದು. ಅಥವಾ ಹುಚ್ಚು ಭಯದಿಂದ ಓಡುವ ಕ್ರೂರ ಮೃಗಗಳು ತಮ್ಮನ್ನು ಸೀಳಿಹಾಕಲೂ ಬಹುದು.

ಸಮರಸೇನನು ಸೈನಿಕರಿಗೆ ಧೈರ್ಯವನ್ನು ಹೇಳುತ್ತ, ಮತ್ತೆ ನಡೆಯಲಾರಂಭಿಸಿದನು. ಇನ್ನಿಷ್ಟು

ಮುಂದೆ ಹೋಗಲು ಒಂದು ವಿಚಿತ್ರ ದೃಶ್ಯವನ್ನು ನೋಡಿ ಗಕ್ಕನೆ ನಿಂತನು. ಇದು ನಿಜವೋ ಎಂಬ ಭ್ರಮೆಯಿಂದ ಕಣ್ಣನ್ನು ತಿಕ್ಕಿಕೊಂಡು ಮತ್ತೆ ಎರಡಡಿ ಮುಂದಿಟ್ಟನು. ತಾನು ನೋಡುವುದು ನಿಜವೇ ಎಂದು ಖಂಡಿತವಾಯಿತು.

ಸಮರಸೇನನು ನಿಂತು ಸೈನಿಕರಿಗೂ ಎಚ್ಚರಿಕೆ ಕೊಟ್ಟನು. ಇದಿರಿನಲ್ಲಿ ಕಾಣುವ ಒಂದು ಮರದ ಕೊಂಬೆಯಲ್ಲಿ ಒಬ್ಬ ಮನುಷ್ಯನನ್ನು ತಲೆಕೆಳಗಾಗಿ ನೇತಾಡ ಕಟ್ಟಿದ್ದರು. ಅವನಲ್ಲಿ ಪ್ರಾಣವಿದೆಯೋ ಇಲ್ಲವೋ ತಿಳಿಯದು. ಕೈಗಳನ್ನೂ ಕಾಲುಗಳನ್ನೂ ಬಳ್ಳಿಗಳಿಂದ ಕಟ್ಟಲಾಗಿತ್ತು. ಅವನ ಮುಖಲಕ್ಷಣ ನೋಡಿದರೆ, ಅವನು ಅಡವಿ ಜಾತಿಯವನೆಂದು ಸ್ಪಷ್ಟವಾಗುತಿತ್ತು.

ಸಮರಸೇನನೂ ಅವನ ಜತೆಯ ಸೈನಿಕರೂ ಆ ವಿಚಿತ್ರ ದೃಶ್ಯವನ್ನು ನೋಡಿ ನಿಶ್ಚೇಷ್ಟಿತರಾದರು. ಈ ಮಾಂತ್ರಿಕ ದ್ವೀಪದಲ್ಲಿ ಕ್ರೂರ ಮೃಗಗಳೂ, ಮಾಂತ್ರಿಕರೂ ಮಾತ್ರವಲ್ಲದೆ, ಸಾಧಾರಣ ಮನುಷ್ಯರು ಕೂಡಾ ಇದ್ದಾರೆಂದಾಯಿತು. "ಈ ಕಾಡು ಮನುಷ್ಯನಿಗೆ ಇಷ್ಟೊಂದು ಕಠಿಣವಾದ ಶಿಕ್ಷೆ ಕೊಟ್ಟವರು ಯಾರೋ? ಏಕೋ? ಇವನ ಗತಿ ಹೀಗಾಗಲು ಕಾರಣವೇನು? ಇಲ್ಲಿ ಕೂಡಾ ಒಂದು ನ್ಯಾಯವೂ ವಿಚಾರಣೆಯೂ ಶಿಕ್ಷೆಯೂ ಇದೆಯೆಂದು ತೋರುತ್ತದೆ. ರಾಜಶಾಸನದ ಹಾಗೆ ಏನೋ ಒಂದು ಇದೆಯೆಂದಾಯಿತು." ಎಂದು ತನಗೆತಾನೇ ಹೇಳಿಕೊಂಡನು ಸಮರಸೇನ.

ಸೈನಿಕರಿಗೇನು ಗೊತ್ತು ಪಾಪ? ಏನೂ ಮಾತಾಡದೆ ಸುಮ್ಮನೆ ಪಿಳಿಪಿಳಿ ನೋಡಿದರು. ಆಗ ಸಮರಸೇನನೇ ಹೇಳಿದನು: "ಇವನನ್ನು ನೋಡಿದರೆ ಕಾಡು ಜಾತಿ ಮನುಷ್ಯನಂತೆ ಕಾಣುತ್ತಾನೆ. ಅಂದ ಮೇಲೆ ಈ ಜಾತಿ ಮನುಷ್ಯರ ನಿವಾಸ ಸ್ಥಾನ ಇಲ್ಲೆಲ್ಲೋ ಇರಲೇಬೇಕು. ಅದನ್ನು ತಿಳಿದುಕೊಳ್ಳ





ವುದರಿಂದ ನಮಗೆ ಎಷ್ಟೋ ಪ್ರಯೋಜನವಾಗಬಹುದು. ಅಂದರೆ ಮುಖ್ಯವಾಗಿ ಈ ಅದ್ಭುತ ದ್ವೀಪದಲ್ಲಿ ನಾವು ಹೇಗೆ ನಡೆದುಕೊಳ್ಳಬೇಕೆಂಬುದು ತಿಳಿಯಬಹುದು. ನಾವಂತೂ ಸದ್ಯ ನಮ್ಮ ಹಡಗುಗಳಿಗೆ ದೂರವಾಗಿ ಬಿಟ್ಟೆವಲ್ಲ? ಈ ದ್ವೀಪದಲ್ಲಿ ಹೇಗೋ ಅಲೆದಾಡಬೇಕಾಗಿ ಬಂದಿತಲ್ಲಾ?"

ಸಮರಸೇನನ ಮಾತುಗಳನ್ನು ಕೇಳುತ್ತಿದ್ದಂತೆ ಸೈನಿಕರಿಗೆ ಕಟ್ಟ ನಿರಾಶೆಯೇ ಕವಿದುಬಂದಂತೆ ತೋರಿತು. ಅವರು ತಮ್ಮ ಹಡಗನ್ನು ಸೇರಿ ತಮ್ಮ ರಾಜ್ಯಕ್ಕೆ ಹೋಗುವ ಆತುರದಲ್ಲಿದ್ದರು. ಆದುದರಿಂದ ಅವರಿಗೆ ಸೇನಾನಿಯ ಮಾತುಗಳು ಕಹೀರಸ ಕುಡಿಯುವ ಹಾಗಾಯಿತು. ಈಗಾದರೂ ನಮ್ಮ ದಾರಿ ನಾವು ನೋಡಿಕೊಂಡು ಹೋಗುವುದನ್ನು ಬಿಟ್ಟು, ಈ ಅಡವಿ ಮನುಷ್ಯನ ನಿವಾಸಸ್ಥಾನವನ್ನು ಹುಡುಕುವ ಗೊಡವೆ ಹೇಳುತ್ತಾನೇಕೋ? ಹೀಗೆಂದುಕೊಂಡು ಸೈನಿಕರು ಮಾತಾಡದಿರುವುದನ್ನು ನೋಡಿ ಸಮರಸೇನನು ಮತ್ತೇನೂ ಹೇಳಲಾಗದೆ ಹೋದನು. ಅವರ ಮನಸ್ಸಿನಲ್ಲಿರುವುದು ಅವನಿಗೆ ಗೊತ್ತಾಗದಿರಲಿಲ್ಲ. ಅವನಿಗಾದರೂ ಬೇಗನೇ ಪೂರ್ವ ತೀರಕ್ಕೆ ಹೋಗಬೇಕೆಂತಲೇ ಇದ್ದಿತು. ಆದರೆ ಮಾರ್ಗವೆಲ್ಲಿದೆ? ಅವನು ಮತ್ತೆ ನಾಲ್ಕಡಿ ಮುಂದೆ ಹೋಗಿ ತಲೆಕೆಳಗಾಗಿ ನೇತಾಡುವವನನ್ನು ಪರೀಕ್ಷಿಸಿ ನೋಡಿದನು. ಅವನ ಶರೀರದ ಮೇಲೆ ಯಾವ ಗಾಯವೂ ಕಾಣಲಿಲ್ಲ. ಬಹುಶಃ ಅವನ ವಿರೋಧಿಗಳು ಈ ರೀತಿಯಾಗಿ ಅವನನ್ನು ಶಿಕ್ಷಿಸಿರಬೇಕು. ಇವನು ಹಸಿವೆ ನೀರಡಿಕೆಗಳಿಂದ ಒಣಗಿ ಸತ್ತು ಹೋಗಿದ್ದಾನೆಂದು ಸಮರಸೇನನಿಗೆ ತೋರಿತು.

ಸತ್ತರೂ ನೇತಾಡಿಕೊಂಡು ಹದ್ದುಗಳ ಬಾಯಿಗೆ ಬೀಳಲಿರುವವನನ್ನು ನೋಡಿ ಅವರೆಲ್ಲರಿಗೂ ಕನಿಕರವಾಯಿತು. ಸಮರಸೇನನು ಸೈನಿಕರ ಕಡೆಗೆ ಬಂದು, "ಈ ಮನುಷ್ಯನಿಗೆ ಬಂದ ಪರಿಸ್ಥಿತಿಯಲ್ಲಿ ಏನೋ ರಹಸ್ಯವಿದ್ದೀತು. ಅದನ್ನು ಹೇಗೆ ತಿಳಿದುಕೊಳ್ಳುವುದೋ ಗೊತ್ತಾಗುವುದಿಲ್ಲ. ಒಂದು ಮಾತ್ರ ನಿಜ. ಈ ದ್ವೀಪದ ಸ್ವಲ್ಪ ಭಾಗವು ಮಾನವರು ವಾಸ ಮಾಡಲು ತಕ್ಕುದಾದ ಪ್ರದೇಶವೆನ್ನಲು ಸಂದೇಹವಿಲ್ಲ. ಅಲ್ಲಿಗೆ ಹೋಗಿ ಇವನ ಈ ದುರ್ಮರಣಕ್ಕೆ ಕಾರಣವೇನೆಂದು ತಿಳಿದುಕೊಳ್ಳಬೇಕು. ಅದರಿಂದ ನಮ್ಮ ಹಡಗನ್ನು ಸೇರುವ ಮಾರ್ಗ ಗೊತ್ತಾಗಬಹುದು." ಎಂದನು.

ಅಷ್ಟರಲ್ಲಿ ಸಮರಸೇನನ ದೃಷ್ಟಿ ದೂರದಲ್ಲಿದ್ದ ಯಾವುದೋ ಒಂದು ವಸ್ತುವಿನ ಮೇಲೆ ಬಿದ್ದು ಹುಬ್ಬೇರಿಸಿದನು. ಬೇಗ ಹೋಗಿ ಆ ವಸ್ತುವನ್ನು ಕೈಗೆತ್ತಿಕೊಂಡನು. ಅದು ಒಡೆದು ಹೋದ ಒಂದು ಸೋರೇ ಬುರುಡೆ. ಅದರ ಮೂತಿ ಚಿಕ್ಕದಾಗಿದ್ದಿತು. ಅದಕ್ಕೊಂದು ಹಗ್ಗವನ್ನೂ ಕಟ್ಟಲ್ಪಟ್ಟಿತ್ತು. ಅಡಿಭಾಗದಲ್ಲಿ ಒಡೆದು ಹೋದ ಆ ಸೋರೇ ಬುರುಡೆಯನ್ನು ಯಾರೋ ಅಲ್ಲಿ ಬಿಸುಟು ಹೋಗಿದ್ದಾರೆ.




ಆ ಸೋರೇ ಬುರುಡೆ ಪ್ರಯಾಣದಲ್ಲಿ ನೀರು ತೆಗೆದುಕೊಂಡು ಹೋಗಲು ಉಪಯೋಗಿಸುವಂತೆ ಕಾಣುತ್ತಿತ್ತು.

"ಆಹಾ ! ನಮ್ಮ ಮೇಲೆ ಕುಂಡಲಿನೀ ದೇವಿಯ ಕರುಣಾಕಟಾಕ್ಷವಿದೆ !" ಎನ್ನುತ್ತಾ ಸಮರಸೇನನು ಆಕಾಶದ ಕಡೆಗೆ ನೋಡಿ ಕೈಗಳನ್ನೆತ್ತಿ ಜೋಡಿಸಿದನು.

ತಮ್ಮ ನಾಯಕನು ಹಾಗೆ ಮಾಡಲು ಕಾರಣವೇನೆಂದು ತಿಳಿಯದಿದ್ದರೂ, ಅವನು ಮಾಡಿದಂತೆಯೇ ಸೈನಿಕರೂ ಆಕಾಶ ನೋಡಿ ನಮಸ್ಕಾರ ಮಾಡಿದರು. ಅವರು ಕಣ್ಣುಗಳಲ್ಲಿ ಕಾಣುವ ಆಶ್ಚರ್ಯವನ್ನೂ, ಪ್ರಶ್ನೆಯನ್ನೂ ಸಮರಸೇನನು ಅರ್ಥ ಮಾಡಿಕೊಂಡು, "ನೋಡಿದಿರಾ ? ಇನ್ನು ನಮಗೆ ಭಯವಿಲ್ಲ. ನಿಮಗೆ ಅರ್ಥವಾಗಲಿಲ್ಲವೇ ? ನಾವು ಈಗ ಮಾನವರು ವಾಸ ಮಾಡುವ ಪ್ರದೇಶವನ್ನು ಸಮೀಪಿಸಿದ್ದೇವೆ. ಈ ನಿರ್ಭಾಗ್ಯನನ್ನು ಹೀಗೆ ನೇತಾಡಿಸಿ ಕೊಂದವರು ಯಾವ ಮಾಂತ್ರಿಕರೋ ಅಲ್ಲ; ಅವನಂಥ ಮನುಷ್ಯರೇ. ಈ ಸೋರೆ ಬುರುಡೆ ಮನುಷ್ಯರು ಉಪಯೋಗಿಸಿಕೊಂಡದ್ದು. ಆದುದರಿಂದ ನಾವು ಸ್ವಲ್ಪ ಜಾಗರೂಕತೆಯಿಂದ ಹುಡುಕಿದರೆ ಮನುಷ್ಯರು ಇಲ್ಲಿಗೆ ಯಾವ ದಾರಿಯಿಂದ ಬಂದರೆಂದು ಕಂಡುಹಿಡಿಯಬಹುದು. ಆಗ ಅದೇ ದಾರಿಯಲ್ಲಿ ಹಿಂದಿರುಗಿ ಹೋಗಿದ್ದಾರೆಂದೂ ಆಗುತ್ತದೆ" ಎಂದನು.

ಕೂಡಲೇ ಸೈನಿಕರಿಗೆ ಉತ್ಸಾಹ ಹುಟ್ಟಿತು. ಆ ಪ್ರಾಂತದಲ್ಲಿ ಮಾನವರು ತುಳಿದ ದಾರಿ ಯಾವುದಾದರೂ ಇದೆಯೋ ಎಂಬುದನ್ನು ಹುಡುಕತೊಡಗಿದರು. ಸ್ವಲ್ಪ ಹೊತ್ತಿನಲ್ಲಿ ಅವರ ಶ್ರಮಕ್ಕೆ ಫಲಸಿಕ್ಕಿತು. ಅಕಡೆ ಹಸಿ ಹುಲ್ಲಿನ ಬಯಲಿನಲ್ಲಿ ಉದ್ದಕ್ಕೆ ಕಾಣಿಸುವ ದಾರಿಯ ಗುರುತು ಬಹಳ ಮಂದಿ ಮನುಷ್ಯರು ಗುಂಪು ಗುಂಪಾಗಿ ಆ ಬಯಲಿನ ಮಧ್ಯದಲ್ಲಿ ಹೋಗಿಬರುವರೆಂಬುದನ್ನು ಸೂಚಿಸುತ್ತಿತ್ತು.

ಎಲ್ಲರೂ ಉತ್ಸಾಹದಿಂದ ಆ ದಾರಿಯನ್ನು ಹಿಡಿದು ನಡೆಯ ತೊಡಗಿದರು. ಸುಮಾರು ಅರ್ಧ ಗಂಟೆಯಲ್ಲಿ ಅವರು ಒಂದು ಎತ್ತರವಾದ ಪ್ರದೇಶವನ್ನು ತಲಪಿದರು. ಅಲ್ಲಿ ನಿಂತು ಸುತ್ತಲೂ ಕಣ್ಣು ಹಾಯುವಷ್ಟು ದೂರದವರೆಗೆ ನೋಡಿದರು. ಅಗ್ನಿಪರ್ವತವು ಇನ್ನೂ ಉರಿಕಾರಿಕೊಂಡೇ ಇದ್ದಿತು. ಪ್ರಾಣಿಗಳು ಪ್ರಾಣಭೀತಿಯಿಂದ ಓಡಿಕೊಂಡೇ ಇದ್ದುವು. ಅವುಗಳ ಕೂಗಾಟ ಕರ್ಣಕಠೋರವಾಗಿ ಕೇಳುತಿದ್ದಿತು. ದೂರದಲ್ಲಿ ಒಂದೆರಡು ಕಡೆಯಲ್ಲಿ ಕಾಡುಗಿಚ್ಚು ಉರಿಯುವ ಅಗ್ನಿಮಾಲೆಯೂ ಕಾಣುತಿತ್ತು.

ಸಮರಸೇನನು ಮುಂದೆ ನಡೆಯುತ್ತಿದ್ದಂತೆ ಸೈನಿಕರು ಅವನನ್ನು ಅನುಸರಿಸಿಕೊಂಡಿದ್ದರು. ಯಾವ ಕಡೆಯಿಂದ ಯಾವ ಕ್ಷಣದಲ್ಲಿ ಕ್ರೂರಮೃಗಗಳೋ, ಮಾಂತ್ರಿಕರೋ ತಮ್ಮನ್ನು ಅಡ್ಡಕಟ್ಟುತ್ತಾರೇನೋ ಎಂಬ ಸಂದೇಹವಿದ್ದೇ ಇದ್ದಿತು. ಮನಸ್ಸಿನಲ್ಲಿ ಕುಂಡಲಿನೀದೇವಿಯ ಸ್ತುತಿಮಂತ್ರವನ್ನು ಪಠಿಸಿ

ಕೊಂಡಿದ್ದರು. ಕತ್ತಿ ಬಿಲ್ಲು ಬಾಣಗಳನ್ನು ಸಿದ್ಧ ವಾಗಿಟ್ಟುಕೊಂಡು ನಡೆಯುತ್ತ ಸ್ವಲ್ಪ ಹೊತ್ತಿಗೆ ಅವರೆಲ್ಲ ಒಂದು ನದಿಯ ತೀರವನ್ನು ತಲಪಿದರು.

ನದಿಯ ಜಲವು ವಿಪರೀತ ವೇಗದಿಂದ ಪ್ರವಹಿಸಿ ಕೊಂಡಿತ್ತು. ನದಿಯ ಮಧ್ಯದಲ್ಲಿ ಇಲ್ಲೀ ಅಲ್ಲೀ ಎಂಬ ಹಾಗೆ ಚಿಕ್ಕವೂ ದೊಡ್ಡವೂ ಆದ ಬಂಡೇಕಲ್ಲು ಗಳಿದ್ದುವು. ಅವುಗಳಿಗೆ ಹೊಡೆದಪ್ಪಳಿಸಿಕೊಂಡು ಓಡುವ ನೀರು ಭಾರಿ ಶಬ್ದ ಮಾಡುತಿತ್ತು. ಆ ನದಿ ಯನ್ನು ದಾಟಿ ಆಚೆಯ ತೀರಕ್ಕೆ ಹೋಗಬೇಕೇ ಬೇಡವೆ? ತಾವು ಸೇರಬೇಕಾದ ಸ್ಥಳಕ್ಕೆ ಮಾರ್ಗವಾವು ದೆಂದು ತಿಳಿಯದಿರುವಾಗ, ಈ ನದಿಯನ್ನು ದಾಟಿ ದರೂ ಒಂದೇ, ದಾಟದಿದ್ದರೂ ಒಂದೇ ಅನಿಸಿತು ಸಮರಸೇನನಿಗೆ.

ಅವರು ಹೋಗಬೇಕಾದುದು ಪೂರ್ವ ಸಮುದ್ರ ತೀರಕ್ಕೆ. ಆ ದಾರಿಯಲ್ಲಿ ಅಗ್ನಿಪರ್ವತವು ಸಿಡಿದು ಅಂತರಾಯ ಬಂದಿದೆ. ಈಗ ನಡೆಯುವುದು ಯಾವುದೋ ಮತ್ತೊಂದು ದಿಕ್ಕಿಗೆ. ಬಹುಶಃ ಈ ದ್ವೀಪವಾಸೀ ಮಾನವರು ಈ ನದಿಯ ಆಚೆಯ ಬದಿಯಲ್ಲಿದ್ದರೂ ಇರಬಹುದು. ಹೀಗೆಲ್ಲಾ ಸಮರ ಸೇನನು ಯೋಚಿಸುತ್ತಾ ನಿಂತಿರುವುದನ್ನು ನೋಡಿ ಒಬ್ಬ ಸೈನಿಕನು, "ಸೇನಾನೀ ದೊರೆಗಳೇ, ಈ ನದಿ ಯನ್ನು ದಾಟುವುದು ಅಷ್ಟೇನೂ ಸುಲಭವಾದ ಕೆಲಸವಲ್ಲ" ಎಂದನು.

"ಹೌದೆ"ಂದು ತಲೆಯಾಡಿಸಿ ಸಮರಸೇನನು ಮತ್ತೆ ಆಲೋಚನೆಗೆ ಬಿದ್ದನು. "ಬಂಡೆಗಳ ನಡುವೆ ದೊಡ್ಡ ದೊಡ್ಡ ಸುಳಿಗುಂಡಿಗಳೂ ಇರುವ ಹಾಗಿದೆ" ಎಂದ ಇನ್ನೊಬ್ಬ ಸೈನಿಕ. ಆಗ ಸಮರಸೇನನು, "ಬಂಡೆಯಿಂದ ಬಂಡೆಗೆ ಹಾರುತ್ತಾ ಹೋಗಬೇಕು. ಉದ್ದವಾದೊಂದು ಹಗ್ಗವಿದ್ದರೆ ನದಿಯನ್ನು ಸುಲಭ ವಾಗಿ ದಾಟಬಹುದು" ಎಂದನು. ಸಿದ್ಧವಾದ ಹಗ್ಗವು ಅರಣ್ಯದಲ್ಲಿ ಹೇಗೆ ಸಿಗುತ್ತದೆ?



ಸೈನಿಕರು ಸಮೀಪದಲ್ಲಿದ್ದ ಮರಗಳ ಕಡೆಗೆ ಹೋಗಿ, ಅವುಗಳಿಗೆ ಸಿಕ್ಕಾಬಟ್ಟೆ ಸುತ್ತಿಕೊಂಡಿದ್ದ ಬಳ್ಳಿಗಳನ್ನು ಕಡಿದು ಅವುಗಳಿಂದ ಬಲವಾದ ಹಗ್ಗ ವನ್ನು ತಯಾರು ಮಾಡಿದರು. ಆ ಹಗ್ಗದ ಒಂದು ಕೊನೆಯನ್ನು ನದಿಯ ಬದಿಯಲ್ಲಿದ್ದ ಮರದ ಬುಡಕ್ಕೆ ಕಟ್ಟಿದರು. ಇನ್ನೊಂದು ಕೊನೆಯನ್ನು ಹಿಡಿದುಕೊಂಡು ಅದರ ಆಧಾರದಲ್ಲಿ ಒಬ್ಬೊಬ್ಬರೇ ಪ್ರವಾಹದ ನಡುವಿನ ಬಂಡೆಕಲ್ಲ ಮೇಲೆ ಹಾರುತ್ತ ಎಲ್ಲರೂ ನದಿಯ ಆಚೆಯ ತೀರವನ್ನು ಸೇರಿಬಿಟ್ಟರು.

ಸೈನಿಕರನ್ನು ಎಚ್ಚರಿಸಿ ಸಮರಸೇನನು ಸಮೀಪ ದಲ್ಲಿದ್ದೊಂದು ಎತ್ತರವಾದ ದಿಣ್ಣೆಯ ಮೇಲೆ ಏರಿದನು, ಅದರ ಆಚೆಯ ಬದಿಯಲ್ಲಿ ಹೆಚ್ಚು ಮರಮಟ್ಟುಗಳಿರಲಿಲ್ಲ. ಅದರಾಚೆಗೆ ಮಾತ್ರ ಗುಂಪು ಗುಂಪಾಗಿ ಮರಗಳ ಮಯ!

ಸಮರಸೇನನು ನಾಲ್ಕು ಸುತ್ತಲೂ ನೋಡಿ ಸೈನಿಕರನ್ನು ಕರೆದು, ದಿಣ್ಣೆಯ ಮೇಲಿನಿಂದ ಕೆಳ

ಗಿಳಿದು ನಡೆದನು. ಸೈನಿಕರೂ ದಿಣ್ಣೆಯ ಮೇಲಿನಿಂದಾಗಿ ಅವನನ್ನು ಅನುಸರಿಸಿದರು. ಅಲ್ಲಿ ಮನುಷ್ಯರು ನಡೆದ ದಾರಿಯ ಗುರುತು ಹಿಡಿದು ನಡೆಯುತ್ತ, ಅವರೆಲ್ಲ ಮರಗಳ ಗುಂಪಿನೊಳಗೆ ಹೊಕ್ಕು ಮುಂದುವರಿದರು.

ಇದ್ದಕ್ಕಿದ್ದ ಹಾಗೆ ಆನೆಗಳು ಘೀಂಕಾರ ಮಾಡಿದ ಧ್ವನಿ ಕೇಳಿತು. ಸೈನಿಕರು ಭಯದಿಂದ ಬೆವೆತು ನಾಯಕನ ಮುಖ ನೋಡಿದರು. ಸಮರಸೇನನು ಸೈನಿಕರಿಗೆ ಸನ್ನೆಮಾಡುತ್ತಾ ಓಡಿ ಹೋಗಿ, ಒಂದು ಭಾರಿ ಮರದ ಮೇಲೆ ಏರಿಕೊಂಡನು. ಸೈನಿಕರು ಕೂಡಾ ಅವನ ಹಿಂದೆಯೇ ಓಡಿ ಆ ಮರದ ಮೇಲೆ ಹತ್ತಿದರು. ನೋಡುತ್ತಿದ್ದಂತೆ ಚಿಕ್ಕದೊಂದು ಆನೆಗಳ ಮಂದೆ ಘೀಂಕರಿಸುತ್ತಾ ಆ ಪ್ರದೇಶಕ್ಕೆ ಬಂದಿತು. ಅವೆಲ್ಲ ತುಂಬ ಭಯಪಟ್ಟಂತಿದ್ದುವು.

ಅರಣ್ಯದಲ್ಲಿ ಅನೇಕ ಕಡೆಯಲ್ಲಿ ಎದ್ದಿರುವ ಕಾಡು ಗಿಚ್ಚನ್ನು ನೋಡಿ ಅದರಿಂದ ತಪ್ಪಿಸಿಕೊಳ್ಳಲು ಈ ಆನೆಗಳು ತಮ್ಮ ಜತೆಗಾರರನ್ನು ಕರೆಯುತ್ತಾ ಓಡುತ್ತಿದ್ದುವು. ಅವುಗಳ ಹೆಜ್ಜೆಗಳ ಸಪ್ಪಳಕ್ಕೆ ಭೂಮಿ ಪ್ರತಿಧ್ವನಿಸುತ್ತಿದ್ದಿತು. ಚಿಕ್ಕ ಚಿಕ್ಕ ಗಿಡ ಪೊದೆಗಳು ಅವುಗಳ ಹೆಜ್ಜೆಗಳಿಂದ ನೆಲಸಮವಾದುವು.

ಮರದ ಮೇಲೆ ಏರಿಕೊಂಡ ಸಮರಸೇನನೂ ಸೈನಿಕರೂ, ಇಂಥ ಮರ ಸಮೀಪವಿಲ್ಲದಿರುತ್ತಿದ್ದರೆ ತಾವೆಲ್ಲ ಆ ಹುಚ್ಚುಗಟ್ಟಿ ಓಡುತ್ತಿರುವ ಆನೆಗಳ ಕಾಲಬುಡದಲ್ಲಿ ಹುಳುಗಳಂತೆ ಸಾಯಬೇಕಿತ್ತೆಂದು ನೆನೆಯುವಾಗ ಅವರ ಶರೀರವು ಜುಮುಗುಟ್ಟಿತು. ತಮ್ಮನ್ನು ರಕ್ಷಿಸಿದ್ದು ಕುಂಡಲಿನೀ ದೇವಿಯೇ ಸರಿ! ಎಲ್ಲರೂ ಮನಸ್ಸಿನಲ್ಲೇ ತಮ್ಮ ಇಷ್ಟ ದೇವಿಯನ್ನು ಸ್ಮರಿಸಿದರು.

ಎರಡು ಮೂರು ಆನೆಗಳ ಮಂದೆ ಆ ದಾರಿಯಾಗಿ ಓಡಿದುವು. ಮತ್ತೆ ಯಾವ ಸದ್ದೂ ಕೇಳಿಬರದೆ ಹೋದರೂ ಅವಸರಪಟ್ಟು ಮರದಿಂದಿಳಿಯಲು ಎಲ್ಲರಿಗೂ ಭಯವೇ.

ಬಹಳ ಹೊತ್ತಾದ ಮೇಲೆ ಇನ್ನೇನೂ ಬಾರದೆಂಬ ಧೈರ್ಯದಿಂದ ಅವರೆಲ್ಲ ಮರದಿಂದ ಕೆಳಕ್ಕೆ ಇಳಿದರು. ಸ್ವಲ್ಪ ಹೊತ್ತು ದಿಕ್ಕುಗಳನ್ನು ನೋಡುತ್ತಾ ನಿಂತರು. ಎಲ್ಲಿ ಯಾವ ಹಲ್ಲಿ ಹರಣೆಗಳ ಸದ್ದಾದರೂ ಹೆದರುತ್ತಿದ್ದರು. ಆ ಮೇಲೆ ತಾವು ಅನುಸರಿಸಿ ಬಂದ ಕಾಲುದಾರಿಯನ್ನು ಹುಡುಕ ತೊಡಗಿದರು. ಅದರ ಗುರುತೇ ಕಾಣಲಿಲ್ಲ. ಆನೆಗಳ ಪಾದಗಳಿಂದ ಆ ಪ್ರದೇಶವೆಲ್ಲಾ ಮಟ್ಟಸವಾಗಿ ಹೋಗಿತ್ತು. ಈಗೇನು ಮಾಡಬೇಕೆಂದು ತಿಳಿಯದೆ ಆಚೆಗೂ ಈಚೆಗೂ ನೋಡುತ್ತ ನಿಂತರು. ಮುಂದೆ ಹೋಗಬೇಕೆಂದಿದ್ದರೂ, ಆ ಹೆಮ್ಮರವನ್ನು ಬಿಟ್ಟು ದೂರ ಹೋಗುವ ಧೈರ್ಯ ಬರಲಿಲ್ಲ. (ಇನ್ನೂ ಇದೆ)






## ೭

[ಪೂರ್ವ ತೀರದಲ್ಲಿರುವ ತಮ್ಮ ಹಡಗುಗಳನ್ನು ತಲಪಬೇಕೆಂದು ಹೊರಟ ಸಮರಸೇನಾದಿಗಳು, ಸ್ಫೋಟಿಸಿದ ಜ್ವಾಲಾಮುಖಿಯ ಕಾರಣದಿಂದ ಮತ್ತಾವ ದಿಕ್ಕಿಗೋ ಹೋಗ ತೊಡಗಿದರು. ಆ ದಾರಿಯಲ್ಲಿ ಮರದ ಕೊಂಬೆಗೆ ತಲೆ ಕೆಳಗಾಗಿ ನೇತು ಹಾಕಲ್ಪಟ್ಟ ಒಬ್ಬ ಮನುಷ್ಯನನ್ನು ನೋಡಿದರು. ಅಲ್ಲಿ ಮಾನವರು ನಡೆದ ಗುರುತನ್ನು ಅನುಸರಿಸಿ ಹೋಗಲು, ಆನೆಗಳ ಮಂದೆಯಿಂದ ಆ ಗುರುತು ಕೂಡಾ ಮಾಯವಾದುವು.]

ಸುಮ್ಮನೆ ನಿಂತರೆ ಪ್ರಯೋಜನವೇನಿಲ್ಲವೆಂದು ಕೊಂಡು ಸಮರಸೇನನು ಸೈನಿಕರಿಗೆ ಧೈರ್ಯ ಹೇಳಿ ಈ ಮೊದಲು ನೋಡಿದ ಕಲ್ಲುಗಳ ದಿಣ್ಣೆಯ ಕಡೆಗೆ ನಡೆಯ ತೊಡಗಿದನು. ಎತ್ತರವಾದ ಆ ದಿಣ್ಣೆಯ ಮೇಲೆ ಹತ್ತಿ ನೋಡಿದರೆ ಸಮೀಪದಲ್ಲಿ ಎಲ್ಲಿ ಯಾದರೂ ಕಾಡು ಜಾತಿಯವರ ಹಟ್ಟಿಗಳೋ ಕೊಟ್ಟಿಗೆಗಳೋ, ಕೊಂಪೆ ಮನೆಗಳೋ ಕಣ್ಣಿಗೆ ಬೀಳ ಬಹುದೆಂದು ಅವನ ಆಶೆ. ಆದರೆ ಅವನು ಅದರ ಮೇಲೆ ಏರಿ ಕಣ್ಣಿಗೆ ಕಣ್ಣಿಟ್ಟು ನೋಡಿದರೂ ಎಲ್ಲಿಯೂ ಮಾನವ ನಿವಾಸಗಳ ಕುರುಹೇ ಕಾಣಲಿಲ್ಲ.

ಹಾಗಾದರೆ ಯಾವ ಕಡೆಯನ್ನು ಹಿಡಿದು ಹೋಗ ಬೇಕು ? ಏನು ಮಾಡಬೇಕು ? ಸಮರಸೇನ ಮತ್ತು ಸೈನಿಕರ ತಲೆಗಳಲ್ಲಿ ಈ ಪ್ರಶ್ನೆ ಸುಮ್ಮನೆ ತಿರುಗು ತ್ತಿದ್ದುವು. ಸಮರಸೇನನು ದಿಣ್ಣೆಯ ಮೇಲಿಂದ ಕೆಳಗೆ ಬಂದು ಒಂದು ಮರದ ಕಾಂಡಕ್ಕೆ ಒರಗಿ ಮುಂದಿನ ಹೆಜ್ಜೆಗಳನ್ನು ಕುರಿತು ಆಲೋಚಿಸು ತ್ತಿದ್ದನು. ನಾಲ್ಕು ಸುತ್ತಲೂ ಒಂದೇ ಶೂನ್ಯವೇ ಅವನ ತಲೆಯನ್ನು ಕೊರೆಯುತ್ತಿದ್ದಿತು.

ಅಂತಹ ಸ್ಥಿತಿಯಲ್ಲಿ ಇದ್ದಕ್ಕಿದ್ದ ಹಾಗೆ ಅವರ ಕಿವಿ ಗಳಿಗೆ ಒಂದು ಆರ್ತನಾದವು ಬಡಿಯಿತು. ಆ ಕಂಠ



ಕಣ್ಣಿಗೆ ಬಿದ್ದ ಕೂಡಲೇ ಸಮರಸೇನಾದಿಗಳು ಗಕ್ಕನೆ ನಿಲ್ಲಲೇಬೇಕಾಯಿತು. ಅವರೆಲ್ಲರನ್ನೂ ಭಯಕಂಪಿತ ಗೊಳಿಸುವ ಘೋರ ದೃಶ್ಯವು ಅವರ ಮುಂದಿತ್ತು. ಆದರೆಡೆಯಲ್ಲಿ ಸಮರಸೇನನಿಗೊಂದು ಆಶಾತಂತು ವಿರುವುದೂ ಕಂಡಿತು. ಆ ಆರ್ತಮನುಷ್ಯನನ್ನು ನೋಡಿ ಸೈನಿಕರಿಗೂ ಒಂದು ಉತ್ಸಾಹವೆದ್ದಿತು. ಈ ಭಯಂಕರ ಮಾಂತ್ರಿಕರ ದ್ವೀಪದಲ್ಲಿ, ಮೊತ್ತಮೊದ ಲನೇ ಬಾರಿಯಾಗಿ ಜೀವದಿಂದಿರುವ ತಮ್ಮಂತಹ ಒಬ್ಬ ಮನುಷ್ಯನನ್ನು ಅವರೀಗ ನೋಡುತ್ತಿದ್ದಾರೆ. ಆ ಮನುಷ್ಯ ಸಿಕ್ಕಿಕೊಂಡಿರುವ ಆಪತ್ತು ಸಾಮಾನ್ಯ ವಾದುದಲ್ಲ.

ಯಾರೋ ಅವನ ತೋಳುಗಳನ್ನು ಹಿಂದಕ್ಕೆ ಬಿಗಿದು ಮರಕ್ಕೆ ಕಟ್ಟಿಹೋಗಿದ್ದಾರೆ. ನಿಸ್ಸಹಾಯ ನಾಗಿರುವ ಅವನನ್ನು ತಿಂದುಹಾಕಲು ನಾಲ್ಕೈದು ತೋಳಗಳು ಬಂದಿವೆ. ಅದೇ ಸಮಯದಲ್ಲಿ ಹಸಿದ ಹೆಬ್ಬುಲಿಯೊಂದು ಕೂಡಾ ಬಂದಿತ್ತು. ಈಗ ಆ ನಿರ್ಭಾಗ್ಯದವನ ಮಾಂಸಕ್ಕಾಗಿ ಆ ತೋಳಗಳೊಳಗೂ, ಹೆಬ್ಬುಲಿಯ ನಡುವೆಯೂ ಹೋರಾಟ ನಡೆಯು ತ್ತಿತ್ತು. ಇಂತಿದ್ದರೂ ಧೈರ್ಯಶಾಲಿಯಾದ ಅವನು ಇನ್ನೂ ಬದುಕಿದ್ದಾನೆ! ಭಯಭೀತನಾದ ಆ ಮನುಷ್ಯ ಕೂಗುತ್ತಿದ್ದಾನೆ ಪಾಪ!

ಸಮರಸೇನನು ನಿಮಿಷದೊಳಗೆ ಅಲ್ಲಿಯ ಪರಿ ಸ್ಥಿತಿಯನ್ನು ಅವಗಾಹನೆ ಮಾಡಿಕೊಂಡನು. ಹೆಬ್ಬು ಲಿಯ ಪಂಜಾದ ಏಟುಗಳಿಂದ ಒಂದೊಂದೇ ತೋಳವು ಅರಚುತ್ತಾ, ನೆಲದಲ್ಲಿ ಹೊರಳುತ್ತಿತ್ತು. ಆ ವಿಧವಾಗಿ ಶತ್ರುಸಂಹಾರ ಮಾಡಿ, ತರುವಾಯ ಸಾವಕಾಶವಾಗಿ ಮನುಷ್ಯನನ್ನು ಸವಿಯ ಬೇಕೆಂಬಂತೆ ಹುಲಿಯ ಧೋರಣೆಯಿದ್ದಿತು. ತಡಮಾಡುವಂತಿಲ್ಲ. ಸಮರಸೇನನು ತಟಕ್ಕನೆ ಬಿಲ್ಲಿಗೆ ಬಾಣಹೂಡಿ ಗುರಿ ಹಿಡಿದು ಹುಲಿಯನ್ನು ಹೊಡೆದನು. ಆ ಪೆಟ್ಟಿಗೆ ಹುಲಿ ಬೊಬ್ಬಿರಿಸುತ್ತಾ ಕೆಳಗೆ ಬಿತ್ತು.

ಸ್ವರ ಏಕಾಕ್ಷಿ ಮಾಂತ್ರಿಕನದೂ ಅಲ್ಲ, ಚತುರ್ನೇತ್ರ ಮಾಂತ್ರಿಕನದೂ ಅಲ್ಲ. ಘೋರವಾದ ವಿಪತ್ತಿನಲ್ಲಿ ಸಿಕ್ಕಿಕೊಂಡ ಒಬ್ಬ ಸಾಮಾನ್ಯ ಮಾನವನ ಆರ್ತನಾದ ವಾಗಿತ್ತು ಅದು.

ಸೈನಿಕರು ಬೆರಗಾಗಿ ಬಾಯಿ ತೆರೆದು ತಮ್ಮ ಒಡೆಯನ ಮುಖವನ್ನು ನೋಡಿದರು. ಸಮರ ಸೇನನು ಸರ್ರನೆ ಒರೆಯೊಳಗಿನ ಕತ್ತಿಯನ್ನು ಸೆಳೆದೆತ್ತಿ ದನು. "ಬನ್ನಿ! ಜಾಗ್ರತೆ!" ಎಂದು ಸೈನಿಕರಿಗೆ ಹೇಳಿ ಸಮರಸೇನನು ಆರ್ತನಾದವು ಹೊರಟ ದಿಕ್ಕಿಗೆ ಓಡಿದನು. ಅವನ ಹಿಂದೆಯೇ ಸೈನಿಕರೂ ಬಿಚ್ಚು ಗತ್ತಿಗಳೊಂದಿಗೆ ಓಡಿದರು.

ಮುಂದೆ ಮುಂದೆ ಹೋದಂತೆ ಮಾನವ ಕಂಠದ ಆರ್ತಾಲಾಪಗಳು ಇನ್ನಷ್ಟು ಸ್ಪಷ್ಟವಾಗಿ ಕೇಳ ತೊಡಗಿತು; "...ಅಯ್ಯಯ್ಯೋ!...ಎಂಥಾ ಸಾವು ಬಂತಲ್ಲಾ!...ರಕ್ಷಿಸುವವರಿಲ್ಲವೇ!...ಕೆಟ್ಟ ಸಾವು ಸಾಯ್ತೇನಪ್ಪೋ!..." ಆದರೆ ಅಲ್ಲಿನ ದೃಶ್ಯವು

ಕೂಡಲೇ ಸೈನಿಕರು ಮುಂದಕ್ಕೆ ಹಾರಿದರು. ಹಸಿದ ತೋಳಗಳು ಅರಚುತ್ತಾ ಅವರ ಮೇಲಕ್ಕೆ ಎಗರಿದುವು. ಸೈನಿಕರು ಸ್ವಲ್ಪವೂ ಹಿಂಜರಿಯದೆ ಕತ್ತಿಗಳಿಂದ ಅವುಗಳನ್ನು ಕಡಿದು ಹಾಕಿದರು. ಅಷ್ಟರಲ್ಲಿ ಬೇಗ ಬೇಗನೇ ಸಮರಸೇನನು ಅಲ್ಲಿಗೆ ಬಂದು ಮರಕ್ಕೆ ಬಿಗಿಯಲ್ಪಟ್ಟ ಮನುಷ್ಯನನ್ನು ಬಂಧಮುಕ್ತ ಮಾಡಿದನು.

"ಸಮಯಕ್ಕೆ ನೀವು ಬರುವಂತೆ ಮಾಡಿದ ಮಹಾದೇವಿಗೆ ನಮಸ್ಕಾರ. ನನ್ನ ಪ್ರಾಣ ಕಾಪಾಡಿದ ನೀವು ಮಹಾನುಭಾವರು. ನಿಮ್ಮ ಪಾದಕ್ಕೆ ಬಿದ್ದೇ. ಎಂದೂ ಮರೆಯಲಾರೆ ನಿಮ್ಮನ್ನು!" ಎಂದು ಅವನು ಸಮರಸೇನನಿಗೆ ಅಡ್ಡಬಿದ್ದು ಸೈನಿಕರಿಗೂ ನಮಸ್ಕರಿಸಿದನು.

ಆ ಮನುಷ್ಯನ ರೂಪರೇಖೆಗಳು, ಮಾತಾಡಿದ ರೀತಿ, ಮರ್ಯಾದೆಗಳನ್ನು ನೋಡಿ ಸಮರಸೇನನಿಗೆ ಆತ್ಯಾಶ್ಚರ್ಯವಾಯಿತು. ಇವನು ಈ ಕಾಡು ಮಾಂತ್ರಿಕರ ದ್ವೀಪಕ್ಕೆ ಸಂಬಂಧಿಸಿದವನಲ್ಲವೆಂದು ತಿಳಿದುಕೊಂಡನು. ಮುಖಲಕ್ಷಣದಿಂದ ಬಹುಶಃ ಕುಂಡಲಿನೀ ದ್ವೀಪವಾಸಿಯೋ ಎಂಬ ಅನುಮಾನ ಕೂಡ ತಲೆ ಹಾಕಿತು.

"ನಿನ್ನದು ಯಾವ ದೇಶ?" ಎಂದು ಅವನನ್ನು ಕೇಳಿದನು ಸಮರಸೇನ.

"ನಾನು ಕುಂಡಲಿನೀ ದ್ವೀಪ ರಾಜ್ಯದ ಒಬ್ಬ ಸೈನಿಕ. ಅಲ್ಲಿಯ ಸೇನಾನಾಯಕರಾದ ಮಹಾಯೋದ್ಧರು ಸಮರಸೇನ ದೊರೆಗಳೆಂದರೆ ತಾವೇ ಅಂತ ಕಾಣುತ್ತದೆ!" ಎಂದು ಆ ವ್ಯಕ್ತಿ ಹೇಳಲು, ಸಮರಸೇನನಿಗೂ, ಸೈನಿಕರಿಗೂ ಆದ ಆಶ್ಚರ್ಯ ಅಷ್ಟಿಷ್ಟಲ್ಲ. ಈ ಹೊಸಬನು ತಮ್ಮೊಂದಿಗೆ ಹಡಗಿನಲ್ಲಿ ಬಂದವನಂತೂ ಅಲ್ಲ. ಹಾಗಾದರೆ ಇವನು ಈ ದ್ವೀಪಕ್ಕೆ ಯಾವಾಗ ಬಂದ? ಹೇಗೆ ಬಂದ? ಏತಕ್ಕೆ ಬಂದ? ಯಾರು ಕಳುಹಿಸಿದರು?






ಹೊಸ ಸೈನಿಕನು ಇವರ ಮನಸ್ಸಿನ ಆಲೋಚನೆಯನ್ನು ತಿಳಿದವನಂತೆ ಹೀಗೆ ಹೇಳತೊಡಗಿದನು: "ನೀವು ಆ ದಿನ ಹಡಗುಗಳಲ್ಲಿ ಪ್ರಯಾಣ ಹೊರಡುವಾಗ ಆಕಾಶದಲ್ಲಿ ಧೂಮಕೇತು ಕಾಣಿಸಿತಲ್ಲವೆ? ಆಸ್ಥಾನ ಜ್ಯೋತಿಷ್ಕರು ಹೇಳಿದ ಮಾತನ್ನು ಮೀರಿ ನೀವು ಹೊರಟೇಬಿಟ್ಟರಷ್ಟೆ? ಆ ಮೇಲೆ ಸ್ವಲ್ಪ ಹೊತ್ತಿಗೆ ತುಫಾನು ಪ್ರಾರಂಭವಾಗಿ, ಅದು ನೀವು ಹೊರಟ ದಿಕ್ಕಿಗೇ ಹರಡುವುದೆಂದು ಗೊತ್ತಾಯಿತು. ಸಮುದ್ರವು ಅಲ್ಲಕಲ್ಲೋಲವಾಯಿತು. ಇದನ್ನು ನೋಡಿ ಚಿತ್ರಸೇನ ಮಹಾರಾಜರು ತುಂಬಾ ಕಳವಳಪಟ್ಟರು. ನಿಮ್ಮ ಕ್ಷೇಮಕ್ಕಾಗಿ ನಾಲ್ಕೈದು ದಿನಗಳವರೆಗೆ ಕುಂಡಲಿನೀ ದೇವಿಗೆ ಪೂಜೆಗಳೂ, ಉತ್ಸವಗಳೂ ನಡೆಯಿಸುವ ಏರ್ಪಾಡು ಮಾಡಿದರು.

"ಆದರೆ ತುಫಾನು ತುಂಬಾ ಭಯಂಕರವಾಗಿತ್ತು. ನಿಮ್ಮೆಲ್ಲರ ಗತಿ ಏನಾಯಿತೋ ಎಂಬ ಭಯದಿಂದ ಮಹಾರಾಜರೂ ಪ್ರಜೆಗಳೂ ಅನ್ನನೀರು ಬಿಟ್ಟು ಕುಳಿತರು. ಕಡೆಗೆ ಚಿತ್ರಸೇನ ಮಹಾರಾಜರು ಆಸ್ಥಾನ ಜ್ಯೋತಿಷ್ಕರಿಂದ ಅಂಜನ ಹಾಕಿಸಿ ನೀವು ಎಲ್ಲಿ ಯಾವ ಪರಿಸ್ಥಿತಿಯಲ್ಲಿ ಇರುವಿರಿ ಎಂಬುದನ್ನು ಬಹಳ ಮಟ್ಟಿಗೆ ತಿಳಿದರು. ತುಫಾನಿನಿಂದ ನಿಮ್ಮ ಕೆಲವು ಹಡಗುಗಳು ಮುಳುಗಿ, ಉಳಿದವರು ಒಂದಾನೊಂದು ದ್ವೀಪದಲ್ಲಿ ಸೇರಿ ಬದುಕಿರುವ ಸಂಗತಿ ಗೊತ್ತಾಯಿತು.

"ಇಷ್ಟು ತಿಳಿದ ಮೇಲೆ ಚಿತ್ರಸೇನ ಮಹಾರಾಜರು ಮಂತ್ರಿ ಸಾಮಂತರೊಂದಿಗೆ ಆಲೋಚನೆ ಮಾಡಿದರು. ನೀವೆಲ್ಲ ದಿಕ್ಕುದೆಸೆ ತಿಳಿಯದೆ ಹೊಸತಾದೊಂದು ಭಯಂಕರ ದ್ವೀಪದಲ್ಲಿರುವುದರಿಂದ ನಿಮಗೆಲ್ಲಾ ದೊಡ್ಡ ಕೇಡು ಬರುವ ಸಂಭವವಿದೆಯೆಂದು ಅವರೆಲ್ಲ ನಿರ್ಣಯಿಸಿದರು. ನಿಮ್ಮನ್ನು ರಕ್ಷಿಸಬೇಕಾದ್ದು ಕರ್ತವ್ಯವೆಂದುಕೊಂಡು, ಕುಂಭಾಂಡರ ನಾಯಕತ್ವದಲ್ಲಿ ಕೆಲಮಂದಿ ಸೈನಿಕರನ್ನು ನಿಮ್ಮನ್ನು ಹುಡುಕಲಿಕ್ಕಾಗಿ ಕಳುಹಿಸಿಕೊಟ್ಟರು."

ಹೊಸ ಸೈನಿಕನು ಇಷ್ಟು ಹೇಳುತ್ತಿರಲು, ಸಮರಸೇನನು, ಹುಬ್ಬುಗಳನ್ನೇರಿಸಿ, "ಯಾವ ಕುಂಭಾಂಡ?...ಓಹೋ! ಕುಂಭಾಂಡ ಸಂಸ್ಥಾನಾಧಿಪತಿಯೋ?" ಎಂದನು ನೆನಪಿಗೆ ತಂದುಕೊಂಡು.

"ಹೌದು, ಅವರೇ! ಇನ್ನು ಅವರಿಗೆ ಗೌರವ ಕೊಡಲಾರೆ. ಆ ದುಷ್ಟನಿಂದಲೇ ನಾನು ಇಂತಹ ಪ್ರಾಣಾಪಾಯಕ್ಕೆ ಸಿಕ್ಕಿಕೊಂಡೆ!" ಎಂದು ಹೊಸ ಸೈನಿಕನು ಹಲ್ಲು ಕಡಿದನು.

ಈ ಮಾತು ಕೇಳಿ ಸಮರಸೇನನು ಬೆರಗಾದನು. ಅವನ ಜತೆಯ ಸೈನಿಕರಿಗೂ ಏನೂ ಅರ್ಥವಾಗದೆ ನೋಡಿದರು. ಮತ್ತೆ ಆ ಹೊಸ ಸೈನಿಕನು ಹೇಳತೊಡಗಿದನು:

"ಹಡಗುಗಳಲ್ಲಿ ಹೊರಟ ನಾವು ಕೆಲವು ದಿನಗಳಲ್ಲಿ ಈ ದ್ವೀಪವನ್ನು ನೋಡಿದೆವು. ಇಲ್ಲಿಯ ದಕ್ಷಿಣ ಪ್ರಾಂತದಲ್ಲಿ ಹಡಗಿನಿಂದ ಇಳಿದು ತೀರವನ್ನು

ಸೇರಿದೆವು. ಕುಂಭಾಂಡನು ನಮ್ಮೆಲ್ಲರನ್ನೂ ತೀರದಲ್ಲೇ ಇರುವಂತೆ ಹೇಳಿ, ಇಬ್ಬರು ಸೈನಿಕರೊಂದಿಗೆ ದ್ವೀಪದೊಳಗೆ ಹೋದನು.

"ಆ ದಿನವಿಡೀ ನಾವು ಅವನ ಬರುವಿಕೆಯನ್ನೇ ಇದಿರು ನೋಡುತ್ತ ಕಾಲ ಕಳೆದೆವು. ಮರುದಿನ ಬೆಳಗ್ಗೆ ಸೂರ್ಯೋದಯವಾಗಿ ಅಷ್ಟು ಹೊತ್ತೇರಿದ ಮೇಲೆ ಕುಂಭಾಂಡನು ಒಬ್ಬನೇ ನಮ್ಮ ಬಳಿಗೆ ಬಂದ. ಹಾಗೆ ಬರಲು ಕಾರಣವೇನೆಂಬುದನ್ನು ಸರಿಯಾಗಿ ಹೇಳದೆ, ಇದು ತನ್ನ ಆಜ್ಞೆ ಎನ್ನುತ್ತ, ನಮ್ಮ ಹತ್ತಿರವಿದ್ದ ಬಿಲ್ಲುಬಾಣಗಳನ್ನೆಲ್ಲಾ ತರಿಸಿ ಅವನ ಮುಂದೆ ಇಡಲು ಹೇಳಿದ. ಆಮೇಲೆ ಅವುಗಳನ್ನೆಲ್ಲಾ ಕಟ್ಟುಕಟ್ಟಿಸಿ ಸಮುದ್ರದೊಳಗೆ ಬಲವಂತದಿಂದ ಬಿಸಾಡಿಸಿಬಿಟ್ಟ! ಎಷ್ಟು ಆಲೋಚನೆ ಮಾಡಿದರೂ ಕುಂಭಾಂಡನ ಈ ವಿಚಿತ್ರವರ್ತನೆಗೆ ಕಾರಣವೇನೆಂದು ಗೊತ್ತಾಗಲಿಲ್ಲ. ಅವನ ಜತೆಯಲ್ಲಿ ದ್ವೀಪದೊಳಗೆ ಹೋದ ಇಬ್ಬರು ಸೈನಿಕರು ಏನಾದರೆಂಬುದೂ ತಿಳಿಯಲಿಲ್ಲ. ನಾವು ತುಂಬಾ ಒತ್ತಾಯ ಮಾಡಿ ಕೇಳಿದ ಮೇಲೆ ಅವರನ್ನು ಅಡವಿ ಜಾತಿಯವರು ಕಡಿದು ಕೊಂದುಬಿಟ್ಟರೆಂದು ಕುಂಭಾಂಡನ ಹೇಳಿದ.

"ಅದನ್ನು ಕೇಳಿದ ಮೇಲೆ ನಮಗೆಲ್ಲಾ ಕುಂಭಾಂಡನ ಮೇಲೆ ಅನುಮಾನವಾಯಿತು. ನಮ್ಮ ಬಿಲ್ಲುಬಾಣಗಳನ್ನೆಲ್ಲಾ ಸಮುದ್ರದಲ್ಲಿ ಹಾಕಿಸಿದ್ದೇಕೆಂದು ಮೇಲಿಂದ ಮೇಲೆ ಕೇಳಿದೆವು. ಅದಕ್ಕೆ ಕುಂಭಾಂಡನು ರೇಗಿಬೀಳುತ್ತ, ಸೇನಾನಾಯಕನಾದ ತಾನು ಏನು ಮಾಡಿದರೂ ಯಾರೂ ಪ್ರಶ್ನಿಸಕೂಡದೆಂದು ಕಠಿಣವಾಗಿ ಬುದ್ಧಿ ಹೇಳಿದ."

ಈ ಮಾತು ಕೇಳಿ ಸಮರಸೇನನು, "ಹಾಗಾದರೆ ಕುಂಭಾಂಡನು ಕೂಡಾ ತನ್ನ ಬಿಲ್ಲುಬಾಣಗಳನ್ನು ಸಮುದ್ರಕ್ಕೆ ಬಿಸುಟನೇ?" ಎಂದು ಪ್ರಶ್ನಿಸಿದನು.




"ಅದೇ ಇಲ್ಲ! ಅದೇ ಆಶ್ಚರ್ಯ! ಅವನು ತನ್ನ ಬಿಲ್ಲುಬಾಣಗಳನ್ನು ಮಾತ್ರ ತನ್ನಲ್ಲೇ ಇಟ್ಟುಕೊಂಡಿದ್ದ. ಆಮೇಲೆ ಸ್ವಲ್ಪ ಹೊತ್ತಿಗೆಲ್ಲಾ ಯಾರೋ ಓಡಿ ಬರುವ ಬೊಬ್ಬೆ ಕೇಳಿಸಿತು. ಈಟೀ ಡಾಲುಗಳನ್ನು ಕುಣಿಸಿಕೊಂಡು ಅನೇಕ ಮಂದಿ ಕಾಡುಜನರು ಭಯಂಕರವಾಗಿ ಬೊಬ್ಬಿಡುತ್ತ ನಮ್ಮ ಕಡೆಗೆ ಬರುತ್ತಿದ್ದರು. ಅವರು ನಮ್ಮನ್ನು ಕೊಲ್ಲಲಿಕ್ಕೆ ಬರುವ ಹಾಗಿದ್ದರು. ನಮ್ಮ ಹತ್ತಿರ ಯಾವ ಆಯುಧವೂ ಇಲ್ಲದ್ದರಿಂದ ಅಲ್ಲಿ ದೊರಕಿದ ಕಲ್ಲುಗಳಿಂದಲೂ, ಮರದ ತುಂಡು ಕೋಲುಗಳಿಂದಲೂ ಆತ್ಮರಕ್ಷಣೆಗೆ ತೊಡಗಿದೆವು.

"ಆಗ ಕುಂಭಾಂಡನು ನಮ್ಮನ್ನೆಲ್ಲಾ ಆ ಕಾಡು ಜಾತಿಯವರಿಗೆ ಶರಣಾಗಿಬಿಡುವಂತೆ ಆಜ್ಞಾಪಿಸಿದ. ಅವನ ವಿಚಿತ್ರವಾದ ಆಜ್ಞೆ ಕೇಳಿ ನಮಗೆ ಅತ್ಯಾಶ್ಚರ್ಯವಾಯಿತು. ಅಷ್ಟರೊಳಗೆ ನಮ್ಮಲ್ಲಿ ಅನೇಕರು ಆಟವಿಕರ ಈಟಿಯ ಮೊನೆಗೆ ಬಲಿಯಾಗಿ

ಹೋದರು. ಉಳಿದವರು ಓಡಿಹೋಗಲೂ ದಾರಿಯಿಲ್ಲದೆ ಜೀವ ಉಳಿದರೆ ಸಾಕೆಂಬ ಒಂದೇ ಉದ್ದೇಶದಿಂದ ಅವರಿಗೆ ಶರಣಾಗತಿಯಾಗಿ ನೆಲದಲ್ಲಿ ಬಿದ್ದೆವು" ಎಂದನು ಆ ಸೈನಿಕ.

"ಇಷ್ಟೊಂದು ಹೋರಾಟ ನಡೆಯುವಾಗ, ತಮ್ಮವರು ಸಾಯುವಾಗ ಕುಂಭಾಂಡ ನಿಮಗೇನೂ ಸಹಾಯ ಮಾಡಲಿಲ್ಲವೇ ?" ಎಂದು ಸಮರಸೇನನು ಕೋಪಾವೇಶದಿಂದ ಕೇಳಿದ.

"ಏನೂ ಮಾಡದೆ ಸುಮ್ಮನೆ ನಿಂತಿದ್ದ. ಆಟವಿಕರು ಅವನ ಗೋಜಿಗೆ ಹೋಗಲಿಲ್ಲ. ನಾವೆಲ್ಲ ಶರಣಾದ ಕೂಡಲೇ ನಮ್ಮ ತೋಳುಗಳನ್ನು ಹಿಂದಕ್ಕೆ ಬಿಗಿದು ಕಟ್ಟಿಹಾಕಿದರು. ಕುಂಭಾಂಡನನ್ನು ಮಾತ್ರ ಮರದ ದಿಮ್ಮಿಗಳಿಂದಾದ ಅಂದಣದ ಮೇಲೆ ಕೂಡಿಸಿ ನಾಲ್ಕು ಜನರು ಹೊತ್ತುಕೊಂಡು ಉತ್ಸಾಹದಿಂದ ಕೇಕೇ ಹಾಕುತ್ತ ಕುಣಿಯುತ್ತ ತಮ್ಮ ಹಳ್ಳಿಗಳ ಕಡೆಗೆ ಹೋದರು. ನಾವೆಲ್ಲಾ ಅವರ ಬಂದಿಗಳಾದೆವು. ಕುಂಭಾಂಡನು ಆ ಕಾಡುಜನರಿಗೆಲ್ಲ ರಾಜನಾದ ಹಾಗೆ ವ್ಯವಹರಿಸತೊಡಗಿದನು. ಆ ಕಾಡು ಜಾತಿಯವರು ಅವನು ಏನು ಹೇಳಿದರೂ ಹಾಗೆ ಮಾಡುತ್ತಿದ್ದರು. ಅವರ ಮೇಲೆ ಕುಂಭಾಂಡನು ಅಷ್ಟೊಂದು ಅಧಿಕಾರವನ್ನು ಹೇಗೆ ಸಂಪಾದಿಸಿದನೋ ನಮಗೆ ಅರ್ಥವಾಗಲಿಲ್ಲ" ಎಂದನು ಹೊಸ ಸೈನಿಕ.

ಸಮರಸೇನನು ಸ್ವಲ್ಪ ಆಲೋಚಿಸಿ, "ಹೌದು, ಅದರಲ್ಲಿರುವ ಅವನ ಸ್ವಾರ್ಥವೇನೆಂಬುದು ನನಗೂ ಅರ್ಥವಾಗಲಿಲ್ಲ. ಆಮೇಲೆ ಏನಾಯಿತು ?" ಎಂದು ಪ್ರಶ್ನೆ ಮಾಡಿದನು.

"ಆಮೇಲೆ ಅರ್ಥವಾಯಿತು. ನಮಗೆ ಬಂದ ಅನುಮಾನಕ್ಕೆ ಮತ್ತೆ ಎರಡು ದಿನಗಳಲ್ಲಿ ಉತ್ತರ ಸಿಕ್ಕಿತು. ಆ ಕಾಡುಜನರಿಗೆ ಬಿಲ್ಲುಬಾಣಗಳೆಂದರೆ ಏನೆಂದು ಗೊತ್ತಿರಲಿಲ್ಲ. ಮನುಷ್ಯನು ಕದಲದೆ ಒಂದು ಕಡೆಯಲ್ಲಿ ನಿಂತು ಆಕಾಶದಲ್ಲೆಲ್ಲಿಯೋ ಇರುವ



ಪಕ್ಷಿಯನ್ನಾಗಲೀ, ದೂರದಲ್ಲಿರುವ ಪ್ರಾಣಿಯನ್ನಾಗಲೀ, ಬಾಣದಿಂದ ಹೊಡೆದುಕೊಲ್ಲುವುದೆಂದರೆ ಅವರಿಗೆ ದೊಡ್ಡ ಮಹಿಮೆಯ ಹಾಗೆ ಕಾಣುತ್ತಿತ್ತು. ಕುಂಭಾಂಡನು ಆ ಮಹಿಮೆ ತನಗೆ ಒಬ್ಬನಿಗೇ ಇದೆಯೆಂದು ಹೇಳಿಕೊಂಡು, ನಮ್ಮ ಬಿಲ್ಲು ಬಾಣಗಳನ್ನೆಲ್ಲ ಸಮುದ್ರಕ್ಕೆ ಹಾಕಿಸಿದ್ದು ಆಟವಿಕರ ಮೇಲೆ ಪ್ರಭುತ್ವ ಸಂಪಾದಿಸಲಿಕ್ಕಾಗಿಯೇ ಅಂತ ನಮಗೆ ಗೊತ್ತಾಯಿತು." ಎಂದನು ಸೈನಿಕ.

"ಹೌದು ಹೌದು, ಆ ಮೇಲೆ ?" ಎಂದು ಕುಂಭಾಂಡನು ಕೇಳಲು, ಸೈನಿಕನು ಮುಂದುವರಿಸಿದ ; "ಒಂದು ದಿನ ಅಡವಿ ಪ್ರಾಂತದೊಳಗೆಲ್ಲಾ ತಮಟೆಯ ಶಬ್ದ ಮಾರ್ಮೊಳಗ ತೊಡಗಿತು. ಎಲ್ಲೆಲ್ಲಿಯ ಆಟವಿಕರು ನೂರಾರು ಸಂಖ್ಯೆಯಲ್ಲಿ ನಾವಿರುವ ಹಳ್ಳಿಗೆ ಬಂದರು. ಅವರಿಗೆಲ್ಲಾ ತಮ್ಮ ಹೊಸ ರಾಜನನ್ನು ನೋಡುವ ಕುತೂಹಲ. ಏನು ಬೊಬ್ಬೆ ! ಏನು ಕುತೂಹಲದ ಕೋಲಾಹಲ ! ತಮಟೆಗಳ ಶಬ್ದ

ಗಳಿಂದ ನಮ್ಮ ಕಿವಿ ಕಿವುಡಾಗಿ ಹೋಯಿತು. ಅವರೆಲ್ಲರ ಮುಂದೆ ಈ ದುಷ್ಟ ಬುದ್ಧಿಯ ರಾಜದ್ರೋಹಿ ಕುಂಭಾಂಡ, ತನ್ನ ಮಹಿಮೆಯನ್ನು ಪ್ರದರ್ಶನ ಮಾಡಿದ. ಎಲ್ಲಿಯೋ ಆಕಾಶದಲ್ಲಿ ಹಾರುತ್ತಿದ್ದ ಒಂದು ಹದ್ದನ್ನು ಬಾಣದ ಏಟಿನಿಂದ ನೆಲಕ್ಕೆ ಬೀಳಿಸಿದ. ಆ ಮೇಲೆ ದೂರದಲ್ಲಿದ್ದ ಒಂದು ಜಿಂಕೆ ಅವನ ಬಾಣಕ್ಕೆ ಬಲಿಯಾಯಿತು. ಕೇಳುವುದೇನು, ಹೇಳುವುದೇನು ? ಯಾರೂ ಇಲ್ಲದ ಊರಿಗೆ ಮರದಡಿ ಮಾರಮ್ಮನೇ ಮುತ್ತೈದೆ ಎಂಬ ಹಾಗೆ ಕುಂಭಾಂಡನ ಮಹಾ ಶಕ್ತಿಗೆ ಆಟವಿಕರೆಲ್ಲಾ ಅದ್ಭುತಗೊಂಡರು. ತಮಗೆ ಇಂತಹ ರಾಜನು ಸಿಕ್ಕಿದನೆಂದು ಸಂತೋಷದಿಂದ ಅವನ ಸುತ್ತಲೂ ಕುಣಿದು ಕುಪ್ಪಳಿಸಿದರು. ಆ ಮೂಢ ಮೊರಟು ಕಾಡಾಡಿಗಳ ಸಹಾಯದಿಂದ ತಾನು ಈ ಮೊತ್ತ ದ್ವೀಪಕ್ಕೂ ರಾಜನಾಗಬೇಕೆಂಬುದೇ ಕುಂಭಾಂಡನ ಉದ್ದೇಶವೆಂಬುದು ನಮಗೆಲ್ಲಾ ಗೊತ್ತಾಯಿತು. ಅವನು ಯಾವ ಕೆಲಸದ ಮೇಲೆ ಯಾರ ಆಜ್ಞೆಯ ಮೇರೆಗೆ ಹೊರಟು ಬಂದೆನೆಂಬುದನೆಲ್ಲಾ ಪೂರ್ತಿ ಮರೆತನು. ಇದಕ್ಕಿಂತ ಹೆಚ್ಚಿನ ರಾಜದ್ರೋಹ ಇನ್ನೇನಿದೆ ? ಇಲ್ಲಿಯ ಈ ಮೊರಡರನ್ನು ಮರುಳು ಮಾಡಿ ದಂಡೆತ್ತಿಕೊಂಡು ಹೋಗಿ ತನ್ನ ಪ್ರಭುವಿನ ಮೇಲೆ ಬಿದ್ದು ಕುಂಡಲಿನೀ ದ್ವೀಪವನ್ನೂ ತಾನೇ ಆಳಬೇಕೆಂದಿರುವನೋ ಏನೋ ? ಇದಂತೂ ಹೊಸ ದ್ವೀಪ. ಇನ್ನೂ ಒಳಗೊಳಗೆ ಏನೇನಿದೆಯೋ ತಿಳಿಯಲಿಲ್ಲ, ಮೊದಲು ಇದನ್ನು ಹೇಗೆ ಆಳುತ್ತಾನೋ ? ಏನು ಮಾಡುತ್ತಾನೋ ?" ಎಂದು ಸೈನಿಕನು ಸುಮ್ಮನಾದನು.

ಸಮರಸೇನನು ಮುಗುಳುನಕ್ಕು, "ಇಲ್ಲಿ ಅವನಿಗೆ ಆಳಲಿಕ್ಕೆ ಏನಿದೆ ? ಒಂದನ್ನೊಂದು ನುಂಗುವ ಪರ್ವತ ಪ್ರಾಣಿಗಳು, ಕಾಡುಮೃಗಗಳು, ಯಾವಾಗೆಂದರಾವಾಗ ಸಿಡಿದೇಳುವ ಅಗ್ನಿ ಪರ್ವತಗಳು, ಒಬ್ಬರಿಗಿಂತ ಒಬ್ಬರು ಅದ್ಭುತ ಶಕ್ತಿವಂತರಾದ ಮಾಂತ್ರಿಕರು ! ಇವರನ್ನೇ ಆಳಬೇಕು !" ಎಂದನು.

"ಮಾಂತ್ರಿಕರೇ ! ನೀವು ನೋಡಿದಿರಾ ! ಅಯ್ಯಯ್ಯೋ !" ಎಂದು ಆ ಸೈನಿಕನು ಸುತ್ತಲೂ ತಿರುಗಿ ನೋಡಿ, "ಅವರನ್ನು ಕುರಿತು ಆಟವಿಕರು ಆಗಾಗ ಹೇಳುವುದನ್ನು ಕೇಳಿದ್ದೇನೆ. ಆದರೆ..." ಎಂದು ಆ ಸೈನಿಕನ ಮಾತು ಮುಗಿಯುವುದರೊಳಗೆ, "ಕೇಳಿದ್ದು ಮಾತ್ರವೇ, ನೋಡಿಲ್ಲವಾದರೆ ಇಗೋ ಪ್ರತ್ಯಕ್ಷ ನೋಡಬಹುದಲ್ಲಾ !" ಎಂಬ ಕಂಚಿನಂಥ ಕಂಠಸ್ವರವು ಸುತ್ತುಮುತ್ತಲೂ ಮಾರ್ಮೊಳಗಿತು. ಮರುಕ್ಷಣದಲ್ಲಿ ಮಹಾಢಯಾಹಾ ಮಾಂತ್ರಿಕ ಚತುರ್ನೇತ್ರನು ತನ್ನ ಕುಚ್ಚು ಟೋಪಿಯನ್ನು ಕೈಯಲ್ಲಿ ಹಿಡಿದುಕೊಂಡು ಮುಗುಳ್ನಗುತ್ತ ಅವರ ಮುಂದೆ ಪ್ರತ್ಯಕ್ಷನಾದನು.

(ಇನ್ನೂ ಇದೆ)






## ೮

[ಅರಣ್ಯದಲ್ಲಿ ದಾರಿ ಹುಡುಕುತ್ತಾ ಹೋಗುವ ಸಮರ ಸೇನಾದಿಗಳಿಗೆ ಪ್ರಾಣಾಪಾಯ ಸ್ಥಿತಿಯಲ್ಲಿರುವ ಹೊಸ ಸೈನಿಕನೊಬ್ಬನು ಕಾಣಿಸಿದನು. ಅವನಿಂದ ಕುಂಡಲಿನೀ ದ್ವೀಪದಿಂದ ಬಂದ ಕುಂಭಾಂಡನ ರಾಜದ್ರೋಹದ ವಿಷಯ ಗೊತ್ತಾಯಿತು. ಆ ದ್ರೋಹಿಯ ಅಪಾಯವನ್ನು ಹೇಗೆ ದೂರ ಮಾಡುವುದೆಂದು ಆಲೋಚಿಸುವಾಗ ಅವರ ಮುಂದೆ ಹಠಾತ್ತಾಗಿ ಚತುರ್ನೇತ್ರನು ಪ್ರತ್ಯಕ್ಷನಾದನು.]

ಮಹಾಮಾಂತ್ರಿಕನಾದ ಚತುರ್ನೇತ್ರನು ಇದ್ದಕ್ಕಿದ್ದ ಹಾಗೆ ತಮ್ಮೆದಿರು ಪ್ರತ್ಯಕ್ಷನಾದುದನ್ನು ನೋಡಿ ಸಮರಸೇನನೂ ಸೈನಿಕರೂ ಭಯದಿಂದ ಜುಮುಗುಟ್ಟಿ ನಡುಗಿದರು. ಥಕ್ಕನೆ ಕಾಣುವಂಥ ಈ ಚತುರ್ನೇತ್ರನು ಮನುಷ್ಯನಲ್ಲವೇನೋ ಎಂದು ಸಂದೇಹವೆದ್ದಿತು. ದೇವತೆಯಾದರೆ ಸೌಮ್ಯನಾಗಿರ ಬೇಕಿತ್ತು. ರಾಕ್ಷಸನಾದರೆ ವಿಕೃತಾಕಾರನಾಗಿರುತ್ತಿದ್ದನು. ಮತ್ತಾವ ಅಮಾನುಷ ಜಾತಿಯವನೋ ? ಇಂಥವನನ್ನು ಈ ಈವರೆಗೂ ಕಂಡರಿಯದ ಹೊಸ ಸೈನಿಕನಂತೂ ಇಂದಿಗೆ ತಮ್ಮೆಲ್ಲರ ಕಥೆ ಮುಗಿದೇ ಹೋಯಿತೆಂಬಂತೆ ನಡುಗುತ್ತಿದ್ದನು. ಅದಕ್ಕೆ ಸರಿಯಾಗಿ ಚತುರ್ನೇತ್ರನ ತೀಕ್ಷ್ಣ ದೃಷ್ಟಿ ಆಗಾಗ ಅವನ ಮೇಲೆ ಹಾರುತ್ತಿತ್ತು. ' ಆ ಚತುರ್ನೇತ್ರನ ಗೂಢಚಾರರಂತಹ ಕರಿಗೂಗೆಯೂ ನರವಾನರವೂ ಅಲ್ಲಿಯೇ ಅಕ್ಕ ಪಕ್ಕಗಳಲ್ಲಿವೆ. ಕಡೆಗೆ ತನ್ನನ್ನು ಕಂಡು ಹೆದರುವವರನ್ನು ನೋಡಿ ಚತುರ್ನೇತ್ರನು ನಗುತ್ತ, "ನನ್ನನ್ನು ನೋಡಿ ನೀವಾರೂ ಭಯಪಡಬೇಕಾಗಿಲ್ಲ. ಪರರಿಗೆ ವೃಥಾ ಕೆಡುಕು ಮಾಡುವುದು ನನ್ನ ಜಾಯಮಾನವಲ್ಲ. ನೀವಂತೂ ಹೊರಗಿನಿಂದ ಬಂದ ಹೊಸಬರು. ಇಲ್ಲಿನ ಯಾವ ಸಂಗತಿಯನ್ನೂ ತಿಳಿಯದವರು.





ನಿಮ್ಮ ಮೇಲೆ ನನಗೆ ಯಾವ ಶತ್ರುತ್ವವೂ ಇಲ್ಲ. ಅಸಲು ಈ ಲೋಕದಲ್ಲಿ ನನಗೆ ಆ ಏಕಾಕ್ಷಿಯೊಬ್ಬನ ಹೊರತು ಬೇರೆ ಯಾರೂ ಶತ್ರುಗಳಲ್ಲ. ಅವನಾದರೂ ನನ್ನನ್ನು ನಾಶಪಡಿಸಲು ನೋಡುವುದರಿಂದಲೇ ಅವನನ್ನು ನಾನು ಶತ್ರುವಾಗಿ ಭಾವಿಸಬೇಕಾಯಿತು" ಎಂದು ಹೇಳಿ, ಹೊಸ ಸೈನಿಕನನ್ನು ನೋಡಿ "ಈ ಹೊಸಬನು ಯಾರು? ನಿಮ್ಮ ಬಳಗದವನಂತೆ ಕಾಣುವನಲ್ಲಾ? ಅವನಿಗೇನಾಯಿತು?" ಎಂದು ಕೇಳಿದನು.

ಅಭಯ ವಾಣಿಯಿಂದ ಧೈರ್ಯಗೊಂಡ ಆ ಹೊಸಬನೇ ಉತ್ತರಕೊಟ್ಟ: "ನನ್ನ ಹೆಸರು ಧನಪಾಲ. ನಾನು ಇವರ ದೇಶದಿಂದಲೇ ಇವರಿಗೆ ತಿಳಿಯದೆ ಬಂದವನು. ಇಲ್ಲಿ ಪ್ರಾಣಾಪಾಯದಲ್ಲಿ ಸಿಕ್ಕಿಕೊಂಡಿದ್ದ ನನ್ನನ್ನು ಆಕಸ್ಮಿಕವಾಗಿ ಇವರು ಬಂದು ಕಾಪಾಡಿದರು."

ಅದನ್ನು ಕೇಳಿ ಚತುರ್ನೇತ್ರನು ತಲೆಯನ್ನು ಅಡ್ಡವಾಗಿ ಆಡಿಸುತ್ತ, "ನಿಮಗೆಲ್ಲಾ ದೊಡ್ಡ ಆಪತ್ತು ಇನ್ನು ಮೇಲಿದೆ. ಅದೀಗ ಬೇಗನೇ ಬರಲಿದೆ. ಇಷ್ಟರ ವರೆಗೆ ನಿಮಗೆ ಕೇಡು ಮಾಡುವವನೊಬ್ಬನಿದ್ದರೆ ಅದು ಆ ಏಕಾಕ್ಷಿ ಮಾಂತ್ರಿಕನೊಬ್ಬನೇ! ಈಗ ಈ ದ್ವೀಪದ ದಕ್ಷಿಣ ಭಾಗದ ಗುಡ್ಡದಾಚೆಯಿಂದ ನಿಮ್ಮಂತಹ ಮನುಷ್ಯರಿಂದಲೇ ನಿಮ್ಮೆಲ್ಲರ ಪ್ರಾಣಕ್ಕೂ ಸಂಚಕಾರ ಬರಲಿದೆಯೆಂಬ ಸಂಗತಿ ನಿಮಗಿನ್ನೂ ಗೊತ್ತಾಗಿಲ್ಲವೆಂದು ಕಾಣುತ್ತದೆ!" ಎಂದನು.

ಅವನು ಹೀಗೆ ಹೇಳಿ ಮುಗಿಸಲು, ಆ ಅಪಾಯವು ಕುಂಭಾಂಡನ ಕಡೆಯದೇ ಇರಬೇಕೆಂದು ಸಮರಸೇನನಿಗೆ ಅರ್ಥವಾಯಿತು.

ಆಗ ಸಮೀಪದಲ್ಲಿದ್ದ ಪೊದೆಗಳ ಮರೆಯಲ್ಲಿ ಇಬ್ಬರು ಆಟವಿಕರು ಅಡಗಿಕೊಂಡು ಅವರನ್ನೇ ಲಕ್ಷ್ಯವಿಟ್ಟು ನೋಡುವ ಸಂಗತಿ ಸಮರಸೇನನಿಗೆ ತಿಳಿಯಲಿಲ್ಲ. ಅವನು ಚತುರ್ನೇತ್ರನ ಕಡೆಗೆ ಎರಡಡಿ ಮುಂದಿಟ್ಟು, "ಮಹಾಮಹಿಮರಾದ ಚತುರ್ನೇತ್ರರೇ! ನೀವು ಒಳ್ಳೆಯ ಗುಣವುಳ್ಳ ಮಾಂತ್ರಿಕರಂತೆ ಕಾಣುವಿರಿ. ನೀವು ಹೇಳಿದ ಹಾಗೆ ನಿಜಕೂ. ನಮಗೆ ಪ್ರಾಣಾಪಾಯ ಬರುವ ಹಾಗೆ ಕಾಣುವುದಾದರೆ, ಅದರ ನಿವಾರಣೆಯ ಮಾರ್ಗವೂ ನಿಮಗೆ ತಿಳಿದಿರಬಹುದು. ಅದನ್ನು ದಯವಿಟ್ಟು ನಮಗೆ ತಿಳಿಸುವಿರಾ?" ಎಂದು ಕೇಳಿಕೊಂಡನು.

ಚತುರ್ನೇತ್ರನು ಕೂಡಲೇ ಉತ್ತರ ಕೊಡಲಿಲ್ಲ. ಸ್ವಲ್ಪ ಹೊತ್ತು ಆಲೋಚಿಸುತ್ತಾ ಸುಮ್ಮನಿದ್ದು, "ಸಮರಸೇನಾ. ಈ ದ್ವೀಪದಲ್ಲಿ ಇಷ್ಟೊಂದು ರಗಳೆಗಳಿಗೆಲ್ಲಾ ಮೂಲಕಾರಣ ಸಮುದ್ರದ ಪಶ್ಚಿಮ ತೀರದಲ್ಲಿ ಅರ್ಧ ಮುಳುಗಿಕೊಂಡಿದ್ದ ಒಂದು ನೌಕೆಯೇ, ಆ ನೌಕೆಯು ತುಂಬಾ ಧನರಾಶಿಗಳಿವೆಯೆಂದು ಎಲ್ಲರಿಗೂ ಗೊತ್ತಾಗಿದೆ. ಧನದಿಂದ ಆಗದಂಥ ಕೆಲಸ ಯಾವುದೂ ಇಲ್ಲವೆಂದು ಎಲ್ಲರೂ ಅಂದುಕೊಂಡಿದ್ದಾರೆ. ಏಕಾಕ್ಷೀ ಮಾಂತ್ರಿಕನಿಗೆ ಧನವು ಬೇಕು. ನನಗೂ ಆ ನೌಕೆಯನ್ನು ಕಾವಲು

ಕಾಯುತ್ತಿರುವ ನಾಗಕನ್ಯೆಯ ಮೇಲೆ ಕಣ್ಣಿದೆ. ನನಗೆ ಅವಳು ಬೇಕು. ಇನ್ನು ನಿಮಗೆ ಏನು ಬೇಕೋ ಅದನ್ನಿಷ್ಟು ಹೇಳು. ಆಗ ನನ್ನ ಕೈಲಾದ ಸಹಾಯ ಮಾಡಲು ನೋಡುತ್ತೇನೆ" ಎಂದನು.

ಸಮರಸೇನನು ಅದಕ್ಕೇನೋ ಉತ್ತರ ಕೊಡಲು ನೋಡುವಾಗ, ಹೊಸ ಸೈನಿಕ ಧನಪಾಲನು ಆಕಸ್ಮಾತ್ತಾಗಿ ಎಲ್ಲರೂ ಗಾಬರಿ ಬೀಳುವಂತೆ ಕೆಟ್ಟದನಿಯಿಂದ ಕಿರಿಚಿದನು. ಸಮರಸೇನನೂ ಸೈನಿಕರೂ ಅವನ ಕಡೆಗೆ ತಲೆ ತಿರುಗಿಸಿ, "ಏನಾಯಿತು ?" ಎಂದರು.

ಧನಪಾಲನು ಸ್ವಲ್ಪ ದೂರದಲ್ಲಿರುವ ಪೊದೆಗಳ ಕಡೆಗೆ ನೋಡಿ ಕೈಯಾಡಿಸುತ್ತ, "ಅಲ್ಲಿ ನೋಡಿ ! ಆ ಕಾಡಾಡಿಗಳು ಇಲ್ಲಿಗೇ ಬಂದಿದ್ದಾರೆ. ನನ್ನನ್ನು ಮರಕ್ಕೆ ಕಟ್ಟಿ ನೇತುಹಾಕಿದವರು ಇವರೇ ! ಇವರೇ !" ಎಂದನು.

ಪೊದೆಗಳ ಮರೆಯಲ್ಲಿ ಅಡಗಿದ್ದ ಆಟವಿಕರು ಸಮರಸೇನನಿಗೂ ಸೈನಿಕರಿಗೂ ಈಗ ಕಾಣಿಸಿದರು. ಸಮರಸೇನನು ಕೂಡಲೇ ಬಿಲ್ಲಿಗೆ ಬಾಣ ಸಂಧಿಸಿದನು.

ಚತುರ್ನೇತ್ರನು ಅವನನ್ನು ತಡೆದು, "ಸಮರ ಸೇನಾ ! ನಿನ್ನ ಬಾಣದ ಗುರಿಗೆ ಅವರು ಸಿಕ್ಕಲಾರರು. ಆಕಾಶದಲ್ಲಿ ಹಾರುವ ಗರುಡಪಕ್ಷಿಯನ್ನೂ, ಓಡುವ ಚಿರತೆಯನ್ನೂ ನೀನು ಬಾಣ ಹೊಡೆದು ಕೆಡವಿರ ಬಹುದು. ಆದರೆ ಇವರು ಮಾತ್ರ ನಿನ್ನ ಬಾಣದ ವೇಗವನ್ನೇ ಮಿಂಚಿ ಓಡುವಂಥವರು. ಇವರ ಸಮಾಚಾರ ನಾನು ನೋಡಿಕೊಳ್ಳುತ್ತೇನೆ" ಎಂದು ಹೇಳಿ, "ನರವಾನರಾ ! ಉಲೂಕಾ !" ಎಂದು ಕೂಗಿದನು. ಮರುಕ್ಷಣದಲ್ಲಿ ಕರಿಗೂಗೆಯೂ, ನರ ವಾನರವೂ ಅವನ ಹತ್ತಿರ ಬಂದುವು.

"ನರವಾನರಾ! ಅಲ್ಲಿ ಹೊಂಚುಹಾಕಿ ಓಡುವವ ರನ್ನು ನೀನು ಹತಮಾಡು, ಉಲೂಕಾ, ಚೆನ್ನಾಗಿ ಹುಡುಕಿ ನೋಡು ! ಸಿಕ್ಕಿದವನನ್ನು ಕುಕ್ಕು ! ಕೊಲ್ಲು !





ತಪ್ಪಿ ಹೋಗಲು ಬಿಡಬೇಡ!" ಎಂದು ಅಪ್ಪಣೆ ಕೊಟ್ಟನು ಚತುರ್ನೇತ್ರ.

ಆ ಕೂಡಲೇ ನರವಾನರವು ದೊಡ್ಡ ದೊಡ್ಡ ಕುಪ್ಪಳಿಕೆಯೊಂದಿಗೆ ಮುಂದಕ್ಕೆ ಧುಮುಕಿಕೊಂಡು ಹೋಗಿ, ಆಟವಿಕರಲ್ಲೊಬ್ಬನನ್ನು ತನ್ನ ಬಲವಾದ ಕೈಗಳನ್ನು ಚಾಚಿ ಬಳಸಿ ಹಿಡಿದುಕೊಂಡಿತು. ಅವನು ಪ್ರಾಣಭೀತಿಯಿಂದ ಅರಣ್ಯವು ಮಾರ್ಮೊಳಗುವಂತೆ ಅರಚ ತೊಡಗಿದನು. ನರವಾನರವು ಅವನನ್ನು ಲೀಲಾಜಾಲವಾಗಿ ಮೂರು ನಾಲ್ಕು ಸುತ್ತು ಬೀಸಿ ಮೇಲಕ್ಕೆ ಹಾರಿಸಿಬಿಟ್ಟಿತು. ಅವನು ಹೋ ಎಂದು ಕೂಗುತ್ತಾ ದೂರದಲ್ಲಿದ್ದೊಂದು ಬಂಡೆಯ ಮೇಲೆ ಹೋಗಿಬಿದ್ದನು.

ಕರಿಗೂಗೆ ಓಡಿ ಹೋಗುವ ಎರಡನೇ ಕಾಡು ಮನುಷ್ಯನ ಮೇಲೆ ರೆಕ್ಕೆಯಾಡಿಸುತ್ತಾ ಹಾರಿತು. ಅದು ತನ್ನ ಮೊನಚಾದ ಉಗುರುಗಳಿಂದ ಅವನ ತಲೆಯ ಮೇಲೆ ಕುಕ್ಕಿ ಪರಚುತ್ತ ಕರ್ಕಶವಾಗಿ ಕೂಗ ತೊಡಗಿತು. ಮತ್ತೆ ಸ್ವಲ್ಪ ಹೊತ್ತಿನೊಳಗೆ ಅವನು ಮೊದಲಿನವನ ಗತಿಗೆ ಮುಟ್ಟಿದನು.

ಅದನ್ನು ನೋಡಿ ಧೈರ್ಯಗೊಂಡ ಸೈನಿಕ ಧನಪಾಲನು ಸುತ್ತಲೂ ನೋಡುತ್ತ, "ಅಯ್ಯಬ್ಬಾ! ಎರಡನೇ ಸಾರಿ ಬದುಕಿದೆ! ನಾಲಗೆ ದಾಹದಿಂದ ಅಂಟಿ ಹೋಗಿದೆ. ಇಲ್ಲೆಲ್ಲಿಯಾದರೂ ನೀರು ಸಿಗುತ್ತದೆಯೇ?" ಎಂದು ಪಕ್ಕದಲ್ಲಿದ್ದ ಸೈನಿಕನನ್ನು ಕೇಳಿದನು.

ಅದನ್ನು ಕೇಳಿ ಚತುರ್ನೇತ್ರನು, "ಎಷ್ಟೇ ದಾಹವಾಗಿದ್ದರೂ ಕಣ್ಣಿಗೆ ಬಿದ್ದ ನೀರಿನ ಬಳಿಗೆಲ್ಲಾ ಹೋಗಿಬಿಡಬೇಡಿ! ತುಂಬಾ ಜಾಗ್ರತೆ ಬೇಕು. ಈ ದ್ವೀಪವು ಎಲ್ಲಾ ವಿಧದಲ್ಲಿಯೂ ಭಯಂಕರವಾದುದು. ನನ್ನೊಂದಿಗೆ ಬನ್ನಿ. ನಿಮಗೆ ನೀರು ಕುಡಿಯಲು ತಕ್ಕುದಾದ ಕೊಳವನ್ನು ತೋರಿಸುತ್ತೇನೆ." ಎಂದು ಹೇಳಿ ತಾನು ಮುಂದಾಗಿ ದಾರಿ ತೆಗೆದನು.

ನೀರು ಸಿಗುವುದೆಂದು ತಿಳಿದು ಎಲ್ಲ ಸೈನಿಕರಿಗೂ ದಾಹವೆನಿಸ ತೊಡಗಿತು. ಎಲ್ಲರೂ ಒಂದಾನೊಂದು ಕೊಳದ ಬದಿಗೆ ಹೋದರು. ಅದರಲ್ಲಿ ಮೊಸಳೆಗಳೂ, ಬೇರೆ ಎಂತಹುದೋ ಕ್ರೂರ ಪ್ರಾಣಿಗಳೂ ಈಜಾಡಿಕೊಂಡಿದ್ದುವು. ಸೈನಿಕರು ಅಂತಹ ಪ್ರಾಣಿಗಳಿಲ್ಲದ ಭಾಗಕ್ಕೆ ಹೋಗಿ, ಕಾಲುಗಳನ್ನು ನೀರಿಗಿಳಿಸದೆ ಬೇಕಾದಷ್ಟು ನೀರು ಕುಡಿದರು. ಎಲ್ಲರಿಗೂ ಹೊಸ ಬಲವೂ ಚೇತನವೂ ಬಂದಿತು.

ಚತುರ್ನೇತ್ರನು ಕೊಳದ ಬದಿಯ ಮರದ ಕೆಳಗೆ ನಿಂತುಕೊಂಡು ಸಮರಸೇನನೊಂದಿಗೆ ಏನೋ ಹೊಸ ವಿಷಯವನ್ನು ಕುರಿತು ಮಾತಾಡುತ್ತಿದ್ದನು. ಅವನು ಹೇಳಿದ ಸಂಗತಿಗಳಿಂದ, ದಕ್ಷಿಣ ಪ್ರಾಂತದಿಂದ ಬರುವ ಅಪಾಯವು ಕುಂಭಾಂಡ, ಹಾಗೂ ಅವನ ಸಹಚರರಾಗಿ ಮಾರ್ಪಟ್ಟ ಕಾಡು ಮನುಷ್ಯರಿಂದಲೇ ಇರಬಹುದು ಎಂಬ ಸಂದೇಹ ಸಮರಸೇನನಲ್ಲಿ ಇನ್ನಷ್ಟು ಬಲವಾಯಿತು.



ಅದೊಂದು ಬದಿಯಲ್ಲಿದ್ದರೆ, ಚತುರ್ನೇತ್ರನು ಹೇಳಿದ ನಾಗಕನ್ಯೆಯ ವಿಷಯದಲ್ಲಿದ್ದ ಅನುಮಾನ ಕೂಡಾ ತೀರಲಿಲ್ಲ. ಅವನು ಚತುರ್ನೇತ್ರನೊಂದಿಗೆ "ಅಯ್ಯಾ, ಚತುರ್ನೇತ್ರರೇ ! ನನ್ನನ್ನು ಅಪಾರ್ಥ ಮಾಡಿಕೊಳ್ಳಬಾರದು. ಧನರಾಶಿಯ ನಾವೆಯನ್ನು ನಾಗಕನ್ಯೆಯೊಬ್ಬಳು ಕಾಪಾಡುವ ಮಾತು ನಿಜ ವೇನು ?" ಎಂದು ಕೇಳಿದನು,

"ಅದರಲ್ಲಿ ಸ್ವಲ್ಪವೂ ಸುಳ್ಳಿಲ್ಲ. ಬೇಕಾದರೆ ನನ್ನ ಹಿಂದೆ ಬನ್ನಿ. ನಿಮಗೆ ಆ ನೌಕೆಯನ್ನೂ, ಅದನ್ನು ಕಾವಲು ಕಾದು ಕಾಪಾಡುವ ನಾಗಕನ್ಯೆಯನ್ನೂ ತೋರಿಸುತ್ತೇನೆ. ಆ ಪ್ರದೇಶಕ್ಕೆ ಹೆಚ್ಚು ನಡೆಯ ಬೇಕಾಗಿಲ್ಲ. ಇಲ್ಲಿಗೆ ಬಹಳ ಸಮೀಪವೇ" ಎಂದನು ಚತುರ್ನೇತ್ರ ಮಾಂತ್ರಿಕ.

ಹಾಗಾದರೆ ಹೋಗೋಣವೆಂದು ಸಮರಸೇನಾದಿಗಳು ಹೊರಟರು. ಚತುರ್ನೇತ್ರನು ಮುಂದಿನಿಂದ ಮಾರ್ಗದರ್ಶಕನಾಗಿ ನಡೆದನು. ಸ್ವಲ್ಪ ಹೊತ್ತಿಗೆಲ್ಲಾ ಅವರು ಒಂದು ಎತ್ತರವಾದ ಗುಡ್ಡದ ಪ್ರಾಂತವನ್ನು ತಲಪಿದರು. ಅಲ್ಲಿಂದ ನಿಂತು ನೋಡಿದರೆ ಪ್ರಶಾಂತ ವಾಗಿರುವ ಸಮುದ್ರವು ಕಾಣುತ್ತಿತ್ತು.

"ಅದೋ ಆ ದಿಕ್ಕನ್ನು ನೋಡು, ನೌಕೆಯೊಂದು ಕಾಣುತ್ತದೆಯೇ ?" ಎಂದು ಚತುರ್ನೇತ್ರನು, ತನ್ನ ಉದ್ದವಾದ ಕೈಯ ತೋರು ಬೆರಳನ್ನು ಸಮುದ್ರದ ಕಡೆಗೆ ನೀಡಿ ತೋರಿಸಿದನು.

ಸಮರಸೇನನೂ ಸೈನಿಕರೂ ಆ ಕಡೆಗೆ ಲಕ್ಷ್ಯ ಗೊಟ್ಟು ನೋಡಿದರು. ಅಲ್ಲೊಂದು ನಾವೆಯಿರುವುದು ಸ್ಪಷ್ಟವಾಗಿ ಕಂಡು ಬಂತು. ಅದು ಅರ್ಧ ಭಾಗದಷ್ಟು ಸಮುದ್ರದಲ್ಲಿ ಮುಳುಗಿತ್ತು. ಹರಿದು ಹೋದ ಅದರ ತೆರೆ ಚಾಪೆಗಳು ಗಾಳಿಯಲ್ಲಿ ಹಾರಾಡುತ್ತಿದ್ದುವು. ಅಲೆಗಳ ಗಣಿಕೆಯಲ್ಲಿ ನಾವೆಯೂ ಓಲಾಡುತ್ತಿದ್ದಿತು. ಆ ರೆ ಅದರಲ್ಲಿರುವ ಧನರಾಶಿಯನ್ನು ಕಾಯುತ್ತಿರುವ ನಾಗಕನ್ಯೆ ಮಾತ್ರ ಎಲ್ಲಿರುವಳೆಂದು ಅವರಿಗೆ ಗೊತ್ತಾಗಲಿಲ್ಲ. ನಾಗಕನ್ಯೆಯಾದುದರಿಂದ ಸಮುದ್ರದಲ್ಲೇ ಇರುವಳೇನೋ ?

"ನಾಗಕನ್ಯೆ ಕಾಣುವುದಿಲ್ಲವಲ್ಲಾ ?" ಎಂದು ಸಮರಸೇನನು ಕಣ್ಣು ಕುತ್ತಿ ನೋಡುತ್ತ ಪ್ರಶ್ನೆ ಮಾಡಿದನು.

ಅವನ ಪ್ರಶ್ನೆ ಕೇಳಿ ಚತುರ್ನೇತ್ರನು ಸಣ್ಣಗೆ ನಕ್ಕು "ಆ ನಾಗಕನ್ಯೆ ಕೂಡಾ ನಿನ್ನ ಕಣ್ಣಿಗೆ ಗೋಚರಿಸಿಬಿಟ್ಟರೆ ಮತ್ತೆ ನನ್ನ ಮಂತ್ರ ತಂತ್ರಗಳು ಹುಲ್ಲಿಗೆ ಸಮ ಅನ್ನಬೇಕು. ನಾಗಕನ್ಯೆಯನ್ನು ನಾನೂ, ಏಕಾಕ್ಷಿ ಮಾಂತ್ರಿಕನೂ ಮಾತ್ರ ನೋಡಲು ಸಾಧ್ಯ. ಏಕಾಕ್ಷಿ ಧನದ ಮೇಲಿನ ಆಸೆಯಿಂದ ಅವಳ ಮೇಲೆ ಹಗೆ ತೊಟ್ಟಿದ್ದಾನೆ. ನಾನೇನೋ ನಾಗಕನ್ಯೆಯನ್ನು ವರಿಸಿಕೊಂಡಿದ್ದೇನೆ. ನೀನು ಆಮೇಲೆ ಅವಳನ್ನು ನೋಡುವೆಯಂತೆ !" ಎಂದನು.

ಸಮರಸೇನನು ಏನೂ ಹೇಳದೆ ಅರ್ಧಬಾಯಿ ತೆರೆದು ಹಾಗೇ ನೋಡುತ್ತ ನಿಂತನು. ಚತುರ್ನೇತ್ರನೊಂದಿಗೆ ಏನು ಹೇಳಬೇಕೆಂದು ಅವನಿಗೆ ಗೊತ್ತಾಗ

ಲಿಲ್ಲ. ವೊತ್ತ ಮೊದಲು ನೌಕೆಯಲ್ಲಿರುವ ಧನ ರಾಶಿಯ ಸಂಗತಿಯನ್ನು ತಿಳಿದಾಗ, ಅದನ್ನು ವಶ ಪಡಿಸಿಕೊಂಡು ಕುಂಡಲಿನೀ ದ್ವೀಪಕ್ಕೆ ತಲುಪಿಸ ಬೇಕೆಂದು ಅಂದುಕೊಂಡಿದ್ದನು. ಆದರೆ ಆ ಕೆಲಸ ಈಗ ಸಾಧ್ಯವಾಗುವಂತಿಲ್ಲವೆಂದು ಕಾಣುತ್ತಿತ್ತು. ಇದರಲ್ಲಿ ಈಗ ಮತ್ತೊಂದು ಅಡ್ಡಗೋಡೆಯು ಹಾಗೆ ರಾಜದ್ರೋಹಿ ಕುಂಭಾಂಡನು ಕೂಡ ಆ ಧನಕ್ಕಾಗಿಯೇ ಪ್ರಯತ್ನಿಸದೆ ಬಿಡಲಾರನು. ಆ ಧನಕ್ಕೆ ಏಕಾಕ್ಷಿ ಮಾಂತ್ರಿಕನ ದೊಡ್ಡ ವಿಘ್ನ ಇದ್ದೇ ಇದೆ. ಇತಂಹ ಮುಕ್ಕಟ್ಟಿನಲ್ಲಿರುವ ಆ ಧನವನ್ನು ನಾಗಕನ್ಯೆಯ ಕಾವಲನ್ನು ತಪ್ಪಿಸಿ ವಶಪಡಿಸಿಕೊಳ್ಳುವುದು ತನ್ನಿಂದ ಆದೀತೆ? ತನಗೆ ದೊಡ್ಡದೊಂದು ಮಹಾ ಮಂತ್ರ ಶಕ್ತಿಯ ಸಹಾಯವಿದ್ದಿದ್ದರೆ ಎಷ್ಟು ಒಳ್ಳೆಯದಿತ್ತು!

ಸಮರಸೇನನ ಆಲೋಚನೆಯ ಕ್ರ ಮ ವ ನ್ನು ಗ್ರಹಿಸಿಕೊಂಡವನಂತೆ ಚತುರ್ನೇತ್ರನು ಗಟ್ಟಿಯಾಗಿ ನಕ್ಕು, "ಸಮರಸೇನಾ! ನಿನ್ನ ಮನಸ್ಸಿನಲ್ಲಿ ನಡೆ ಯುವ ತರ್ಕ ವಿತರ್ಕಗಳು ನನಗೆ ಗೊತ್ತಾಗುತ್ತವೆ. ನಿನಗೆ ಬೇಕಾದ ಆ ಧನದ ವಿಷಯದಲ್ಲಿ ಮಾತ್ರ ನಾನು ನಿನ್ನ ಸ್ಪರ್ಧೆಗಾರನಲ್ಲವೆಂದು ತಿಳಿ. ಇದರಲ್ಲಿ ನಿನ್ನೊಂದಿಗೆ ಸ್ಪರ್ಧಿಸುವವನು ಆ ಏಕಾಕ್ಷಿ ಮಾಂತ್ರಿಕ ನೊಬ್ಬನೇ, ಆದುದರಿಂದ ನಾವಿಬ್ಬರೂ ಒಂದಾಗಿ ಬಿಟ್ಟರೆ ಏನಾದರೂ ಕಾರ್ಯ ಸಾಧನೆ ಮಾಡಿಕೊಳ್ಳ ಬಹುದೇ ಅಂತ ಆಲೋಚಿಸುತ್ತಿದ್ದೇನೆ. ಇದು ನಿನಗೂ ಸಂತೃಪ್ತಿ ತಾನೇ?" ಎಂದನು.

ಚತುರ್ನೇತ್ರನು ಹೀಗೆ ಮಾತಾಡಿದುದನ್ನು ಕೇಳು ವಾಗ ಸಮರಸೇನನ ಮನಸ್ಸಿಗೆ ಅಮೃತ ಸೇಚನ ಮಾಡಿದಂತಾಯಿತು. ತುಂಬಾ ಉತ್ಸಾಹವೆದ್ದಿತು. ಈ ಭಯಂಕರ ದ್ವೀಪದಿಂದ ಪ್ರಾಣದೊಂದಿಗೆ ಹೇಗೆ ಹೊರಬೀಳುವುದೋ ಎಂದು ಆಲೋಚಿಸಿಕೊಂಡಿದ್ದವ ನಿಗೆ ಒಂದು ಹೊಸ ಆಶೆ ಉದಿಸಿತು. ಅದೇನೆಂದರೆ ಮಹಾವೀರನಾದ ರಾಜದ್ರೋಹಿ ಕುಂಭಾಂಡನನ್ನು




ನಾಶಪಡಿಸಿಬಿಡಬೇಕು. ಆ ನೌಕೆಯ ಧನವನ್ನೆಲ್ಲಾ ವಶಪಡಿಸಿಕೊಳ್ಳಬೇಕು. ಆ ನಾವೆ ಸಾಧಾರಣ ನಾವೆ ಯಂತೂ ಅಲ್ಲ. ಅದರ ರಹಸ್ಯ ಏನೋ ಬೇರೆಯೇ ಇರಬೇಕು. ಅದರ ರ ಹ ಸ್ಯ ದ ಲ್ಲಿ ಏನೇನು ಅಡಗಿದೆಯೋ!

ಈ ಆಲೋಚನೆಯಿಂದ ಎಲ್ಲದಕ್ಕೂ ಮೊದಲು ಆ ನಾವೆಯು ಹೊಂದಿರುವ ರಹಸ್ಯ ವಿಷಯಗಳನ್ನು ತಿಳಿದು ಕೊಳ್ಳುವ ಕುತೂಹಲದ ಒತ್ತಡ ಹೆಚ್ಚಾಯಿತು. ಆವನು ಚತುರ್ನೇತ್ರನನ್ನು ನೋಡಿ, "ಚತುರ್ನೇತ್ರಾ! ನಾವೀಗ ಸ್ನೇಹಿತರಾದೆವೆಂಬ ಸಲಿಗೆಯಲ್ಲಿ ಮಾತಾಡು ತ್ತೇನೆ. ಸಾಧಾರಣವಾಗಿ ಮಾಂತ್ರಿಕರೆಂದರೆ ಯಾವ ಮನುಷ್ಯನಾದರೂ ಭಯಪಡುವನು. ಆದರೆ ಈ ದ್ವೀಪದಲ್ಲಿರುವ ನಿನಗೂ ಏಕಾಕ್ಷಿ ಮಾಂತ್ರಿಕನಿಗೂ ನಡುವೆ ಎಷ್ಟೋ ವ್ಯತ್ಯಾಸವಿದೆ. ನಿನ್ನಲ್ಲಿ ಭೂತ ದಯವೂ ಮಿತ್ರವಾತ್ಸಲ್ಯವೂ ಒಸರುವುದನು ನೋಡುತ್ತೇನೆ. ನಿನಗೆ ನನ್ನಿಂದ ಯಾವ ಸಹಾಯ

ಬೇಕಾದರೂ ನನ್ನ ಶಕ್ತಿಯ ಮಟ್ಟಿಕ್ಕೆ ವಂಚನೆ ಇಲ್ಲದೆ ಮಾಡುತ್ತೇನೆ. ಈಗ ಮೊದಲು ಆ ಧನರಾಶಿಯಿಂದ ತುಂಬಿದ ನಾವೆಯ ರಹಸ್ಯ ವಿಷಯವನ್ನು ತಿಳಿಯಬೇಕೆಂದು ಬಯಸುತ್ತೇನೆ" ಎಂದನು.

ಚತುರ್ನೇತ್ರನು ಕೂಡಲೇ ಉತ್ತರ ಕೊಡಲಿಲ್ಲ. ಹೇಳಲೋ ಬಿಡಲೋ ಎಂಬಂತೆ ಸ್ವಲ್ಪ ಹೊತ್ತು ಮೇಲೆ ಕೆಳಗೆ ನೋಡಿ, "ನೋಡಪ್ಪಾ ಸಮರಸೇನಾ, ಆ ನಾವೆ, ಧನರಾಶಿ, ಆ ನಾಗಕನ್ಯೆಯ ಕಥೆ ಅದನ್ನೆಲ್ಲಾ ಹೇಳಬೇಕಾದರೆ ಅದರ ವಿಷಯ ತುಂಬಾ ಇದೆ. ಅದನ್ನೆಲ್ಲಾ ಕೇಳಲು ನಿನಗೆ ಕುತೂಹಲವಿಲ್ಲದೆಯೂ ಹೋಗಬಹುದು. ಚಿಟುಕಾಗಿ ಹೇಳುತ್ತೇನೆ ಕೇಳು. ಬಹುಃಶ ನೀನು ಶಮನದ್ವೀಪದ ಸಮಾಚಾರ ಕೇಳಿರಲಿಕ್ಕಿಲ್ಲ. ಒಂದು ವೇಳೆ ಆ ಹೆಸರನ್ನು ಕೇಳಿದ್ದರೂ ಮತ್ತೇನೂ ಗೊತ್ತಿರಲಾರದು. ಕೆಲವರು ಅದನ್ನು ಬೇರೆ ಹೆಸರಿನಿಂದ ಕರೆಯುವುದೂ ಉಂಟು. ಆ ಶಮನ ದ್ವೀಪವನ್ನು ಶಾಕ್ತೇಯನೆಂಬ ರಾಜನು ಆಳುತ್ತಿದ್ದಾನೆ. ಶಾಕ್ತೇಯನೆಂದರೆ ನಿನಗೆ ಗೊತ್ತಿರಬಹುದು. ದೊಡ್ಡ ಚಂಡಿಕಾ ಭಕ್ತ. ಮಂತ್ರ ತಂತ್ರ ವಿದ್ಯೆಗಳಲ್ಲಿ ಅವನಿಗೆ ಅವನೇ ಸಾಟಿ.

ಒಂದು ಸಾರಿ ರಾಜಧಾನೀ ನಗರದಲ್ಲಿ ನವರಾತ್ರಿ ಸಮಯದಲ್ಲಿ ದೇವಿಯ ಉತ್ಸವ ನಡೆಯುತ್ತಿತ್ತು. ಆಗ ಶಾಕ್ತೇಯ ರಾಜನು ಸ್ವತಃ ದೇವಿಯ ಪೂಜೆ ಮಾಡುವನು. ಇದ್ದಕ್ಕಿದ್ದಂತೆ ಜನರ ಕೋಲಾಹಲದ ಮಧ್ಯದಲ್ಲಿ ಚಂಡೀದೇವಿ ಹೂಂಕರಿಸಿ ಹೀಗೆಂದಳು: 'ಭಕ್ತ ಜನರೇ! ನಿಮ್ಮ ಭಕ್ತಿಗೆ ಮೆಚ್ಚಿದ್ದೇನೆ. ಆದರೆ ನಿಮ್ಮ ಈ ಬಲಿಪೂಜೆಯಿಂದ ನನಗೆ ತೃಪ್ತಿಯಾಗಲಿಲ್ಲ. ನನಗೆ ಅಪೂರ್ವವಾದೊಂದು ಸುಂದರವೂ ಭವ್ಯವೂ ಆದ ಆಲಯವನ್ನು ಕಟ್ಟಿಸಿಕೊಡಬೇಕು.' ದೇವಿಯ ಗಂಭೀರ ಧ್ವನಿಯನ್ನು ಕೇಳಿ ಶಾಕ್ತೇಯನು ನಮಸ್ಕಾರ ಮಾಡಿ, 'ತಾಯೇ! ನಿನಗೆ ದೊಡ್ಡ ದೇವಾಲಯವನ್ನು ನಾನು ಕಟ್ಟಿಸುತ್ತೇನೆ. ಅದರ ಗೋಪುರವನ್ನು ಆಕಾಶಕ್ಕೆ ಮುಟ್ಟಿಸುತ್ತೇನೆ.' ಎಂದು ಹೇಳಿಕೊಂಡನು.

ಅದನ್ನು ಕೇಳಿ ಚಂಡೀ ದೇವಿ ಮತ್ತಿಷ್ಟು ಜೋರಾಗಿ ಹುಂಕರಿಸಿ 'ನನ್ನ ಆಲಯದ ಗೋಪುರವು ಸಾಧಾರಣ ಕಲ್ಲು ಮಣ್ಣುಗಳಿಂದ ಕಟ್ಟಿದರೆ ನಾನು ತೃಪ್ತಳಾಗಲಾರೆ. ಎಲ್ಲವನ್ನೂ ಬೆಳ್ಳಿ ಚಿನ್ನಗಳಿಂದಲೇ ಕಟ್ಟಿಸಬೇಕು, ಆಗಲೇ ನನಗೆ ತೃಪ್ತಿ. ಇದನ್ನು ನೆನಪಿಟ್ಟುಕೋ' ಎಂದಳು.

ಅದನ್ನು ಕೇಳಿ ಶಾಕ್ತೇಯನು ನಿಂತಲ್ಲೇ ಹೆದರಿ ನಡುಗಿ ನೀರಾದನು. ಚಂಡೀದೇವಿಯ ಆಜ್ಞೆಯನ್ನು ಮೀರುವಂತಿಲ್ಲ. ಆದರೆ ಅಷ್ಟು ದೊಡ್ಡ ದೇವಾಲಯಕ್ಕೆ ಬೇಕಾದ ಚಿನ್ನ ಬೆಳ್ಳಿಗಳನ್ನು ಹೇಗೆ ಗಳಿಸುವುದು?

(ಇನ್ನೂ ಇದೆ)






## ೯

[ಚತುರ್ನೇತ್ರನೂ ಸಮರಸೇನನೂ ಮಾತಾಡಿಕೊಂಡಿರುವಾಗ, ಪೊದರಿನ ಮರೆಯಲ್ಲಿ ಹೊಂಚಿ ಕೇಳುತ್ತಿದ್ದ ಆಟವಿಕರನ್ನು ಕರಿಗೂಗೆಯೂ ನರವಾನರವೂ ಓಡಿಸಿ ಬಿಟ್ಟುವು. ಚತುರ್ನೇತ್ರನು ಸಮರಸೇನನಿಗೆ ಧನರಾಶಿಯ ನಾವೆಯ ವೃತ್ತಾಂತವನ್ನು ಹೇಳ ತೊಡಗಿದನು. ಶಾಕ್ತೇಯನೊಬ್ಬನಿಗೆ ಚಂಡೀದೇವಿ ಪ್ರತ್ಯಕ್ಷಳಾಗಿ, ತನಗೆ ಬೆಳ್ಳಿ, ಬಂಗಾರದ ಆಲಯವನ್ನು ಕಟ್ಟಿಸಿ ಕೊಡಲು ಕೇಳಿಕೊಂಡಳಂತೆ.]

ಶಿವಾನದ್ವೀಪದ ರಾಜನಾದ ಮಹಾ ಚಂಡೀಭಕ್ತ ಶಾಕ್ತೇಯನನ್ನು ಕುರಿತು ಚತುರ್ನೇತ್ರನು ಹೇಳುತ್ತಿದ್ದ ಅದ್ಭುತ ವೃತ್ತಾಂತವನ್ನು ಕೇಳಿ ಸಮರಸೇನನಿಗೆ ತುಂಬಾ ಕುತೂಹಲವೆದ್ದಿತು. ಚಂಡೀ ಮಹಾದೇವಿ ತನಗೆ ಆಲಯವನ್ನು ಕಟ್ಟಿಸುವಂತೆ ಕೇಳಿಕೊಂಡರೆ ಆಶ್ಚರ್ಯವೇನಿಲ್ಲ. ಆದರೆ ಕಲ್ಲುಮಣ್ಣುಗಳಿಗೆ ಬದಲಾಗಿ ಪೂರ್ತಿ ಬೆಳ್ಳಿ, ಬಂಗಾರಗಳಿಂದಲೇ ಕಟ್ಟಿಸಬೇಕೆಂದು ಅವಳು ಪ್ರತ್ಯೇಕವಾಗಿ ಕೇಳುವುದೆಂದರೆ ಬಹಳ ವಿಚಿತ್ರವೇ ಸರಿ. ಒಂದು ದೇವಾಲಯವನ್ನು ಪೂರ್ತಿ ಚಿನ್ನದಿಂದ ಕಟ್ಟಲು ಮಾನವಮಾತ್ರರಿಂದ ಸಾಧ್ಯವಾಗುವುದುಂಟೆ ? "ಅಲ್ಲಯ್ಯಾ ಚತುರ್ನೇತ್ರಾ, ತನ್ನ ಪ್ರೀತಿಯ ಭಕ್ತನನ್ನು ಚಂಡೀದೇವಿ ದುಸ್ಸಾಧ್ಯವಾದ ಕೆಲಸಕ್ಕೆ ಪ್ರೇರೇಪಿಸುವುದೆಂದರೆ ಆಶ್ಚರ್ಯವಾಗಿದೆ. ಬಹುಃಶ ಆ ಶಾಕ್ತೇಯನು ದೇವಿಗೆ ಏನೋ ತಪ್ಪು ಮಾಡಿರಬೇಕು, ಹೌದಾ ? " ಎಂದನು ಸಮರಸೇನ.

ಚತುರ್ನೇತ್ರನು ತಲೆಯಾಡಿಸಿ ಗಟ್ಟಿಯಾಗಿ ನಕ್ಕು, "ಸಮರಸೇನಾ, ಅಂಥಾದ್ದೇನೂ ಇಲ್ಲ. ಅಸಲು ನಿನಗೆ ಶಕ್ತಿಯ ಉಪಾಸನೆಯ ತತ್ವವು ತಿಳಿಯದುದರಿಂದಲೇ ಹೀಗೆ ಸಂದೇಹಪಡುತ್ತೀ.




ಇಹ ಲೋಕದ ಸುಖಿಗಳನ್ನೂ, ಸಹಮಾನವರ ಮೇಲೆ ಅಧಿಕಾರವನ್ನೂ ಬಯಸುವವರಿಗೆ ಇಂತಹ ಶಕ್ತಿಯ ಉಪಾಸನೆ ಬೇಕಾಗುತ್ತದೆ. ಅಂತಹ ಶಕ್ತಿಗಳನ್ನು ಪಡೆಯಲಿಕ್ಕಾಗಿಯೇ ಶಾಕ್ತೇಯ ರಾಜನು ಚಂಡೀದೇವಿಯನ್ನು ಉಪಾಸಿಸಿದನು. ದೇವಿ ಕರುಣೆ ತೋರಿಸಿ ಆ ಶಕ್ತಿಗಳನ್ನು ಪ್ರಸಾದಿಸುವ ಮೊದಲು, ಅವನ ಧೈರ್ಯ ಸಾಹಸಗಳನ್ನು ಮಾತ್ರವಲ್ಲದೆ ತನ್ನ ಮೇಲೆ ಅವನಿಗೆ ಭಕ್ತಿ ಶ್ರದ್ಧೆಗಳು ಎಷ್ಟಿವೆ ಎಂಬುದನ್ನು ಕೂಡಾ ಪರೀಕ್ಷಿಸುತ್ತಾಳೆ. ಚಂಡೀದೇವಿ ಅಂತಹ ಪರೀಕ್ಷೆಗಾಗಿಯೇ ಆ ರೀತಿಯಾಗಿ ತೋರಿಸಿಕೊಂಡಿದ್ದಾಳೆ" ಎಂದನು.

"ಓಹೋ! ಅಸಾಧಾರಣ ಪರೀಕ್ಷೆಯೇ ಸರಿ! ಹಾಗಾದರೆ ಶಾಕ್ತೇಯನು ಅಷ್ಟೊಂದು ಬೆಳ್ಳಿ ಬಂಗಾರಗಳನ್ನು ಸಾಧಿಸಿಬಿಟ್ಟನೇನು? ಆ ನಾವೆ ಅವನದೇನಾ?" ಎಂದು ಕೇಳಿದನು ಸಮರಸೇನ.

"ಈಗ ನಾನು ಹೇಳಲಿರುವ ಅದ್ಭುತ ಕಥೆ ಅದೇ. ಆ ಧನರಾಶಿಗಳಿಂದ ತುಂಬಿದ ನಾವೆ ಹಾಗು, ಅದನ್ನು ಕಾವಲು ಕಾಯುವ ನಾಗಕನ್ಯೆಯ ವೃತ್ತಾಂತವೆಲ್ಲವೂ ಇದರಲ್ಲೇ ತುಂಬಿದೆ. ನಾನೂ ಏಕಾಕ್ಷಿ ಮಾಂತ್ರಿಕನೂ ಇಷ್ಟೊಂದು ಬದ್ಧಶತ್ರುಗಳಾಗಿರಲು ಕಾರಣ ಕೂಡಾ ಈ ವೃತ್ತಾಂತದಿಂದ ನಿನಗೆ ತಿಳಿಯುತ್ತದೆ. ಇವೆಲ್ಲದಕ್ಕೂ ಮೂಲ ಚಂಡೀದೇವಿಯ ಅಪೇಕ್ಷೆಯೂ ಅದನ್ನು ನೆರವೇರಿಸಲು ಶಾಕ್ತೇಯನು ಸಿದ್ಧನಾದುದೂ ಆಗಿದೆ" ಎಂದು ಚತುರ್ನೇತ್ರನು ಮುಂದುವರಿಸಿ ಹೇಳಿದನು:

ಶಾಕ್ತೇಯನು ಚಂಡೀದೇವಿಯ ಕೋರಿಕೆಯನ್ನು ನೆರವೇರಿಸಬೇಕೆಂದು ನಿಶ್ಚಯಿಸಿಕೊಂಡನು. ನಿಜ ಹೇಳುವುದಾದರೆ ಅದನ್ನು ದೇವಿಯ ಕೋರಿಕೆ ಎನ್ನುವುದಕ್ಕಿಂತಲೂ ಆಜ್ಞೆ ಎಂದೇ ತಿಳಿಯಬೇಕು. ಅಂತಹ ಭಾವನೆಯಿಂದ ಕೂಡಿದ ಶಾಕ್ತೇಯನು, ಬೆಳ್ಳಿ ಬಂಗಾರಗಳನ್ನು ಸಂಪಾದಿಸಬೇಕಾದರೆ ನಿಮ್ಮ ಹಾಗೆಯೇ ಬೇರೆ ಬೇರೆ ರಾಜ್ಯಗಳ ಮೇಲೆ ದಂಡಯಾತ್ರೆ ಹೋಗಬೇಕೇಹೊರತು ಬೇರೆ ದಾರಿ ಇಲ್ಲವಷ್ಟೆ?

ಶಮನದ್ವೀಪದಲ್ಲಿ ಹೆಚ್ಚು ಸೈನಿಕರಿರಲಿಲ್ಲ. ಅದಕ್ಕಾಗಿ ಅವನು ದೇಶದ ನಾಲ್ಕು ಮೂಲೆಗಳಲ್ಲಿಯೂ ಸೈನಿಕರಿಗೆ ತಕ್ಕ ಆಳುಗಳನ್ನು ಶೋಧಿಸತೊಡಗಿದನು. ಒಳ್ಳೆಯ ದೇಹಶಕ್ತಿಯೂ, ಆರೋಗ್ಯವೂ, ಧೈರ್ಯಸಾಹಸಗಳೂ ಇರುವ ಯುವಕರನ್ನು ಆರಿಸಿ ಸೈನ್ಯದಲ್ಲಿ ಸೇರಿಸಿಕೊಳ್ಳಲು ಪ್ರಾರಂಭಿಸಿದನು. ಒಂದೊಂದು ಗ್ರಾಮಕ್ಕೂ ಹೋಗಿ, ಅಲ್ಲಿರುವ ಯುವಕರನ್ನೆಲ್ಲಾ ಒಂದೆಡೆಯಲ್ಲಿ ಕೂಡಿಸಿ ಮಲ್ಲಯುದ್ಧದಲ್ಲಿ, ಕತ್ತಿ ಕಾಳಗದಲ್ಲಿ, ದೊಣ್ಣೆ ಬೀಸುವುದರಲ್ಲಿ, ಬಾಣಬಿಡುವುದರಲ್ಲಿ ಸ್ಪರ್ಧೆಗಳನ್ನಿಟ್ಟು, ಅವುಗಳಲ್ಲಿ ಗೆದ್ದವರನ್ನು ಮಾತ್ರ ಸೈನಿಕರಾಗಿ ಸ್ವೀಕರಿಸುತ್ತಿದ್ದನು. ಚಂಡೀದೇವಿಯ ಮಹಾಭಕ್ತನಾದ ಶಾಕ್ತೇಯನು ಈ ರೀತಿಯಾಗಿ ಸೈನಿಕ

ರನ್ನು ಸಮಾವೇಶಗೊಳಿಸಿಕೊಂಡಿದ್ದ ಕಾಲದಲ್ಲಿ ನಾನು ಇಪ್ಪತ್ತು ವರ್ಷ ಪ್ರಾಯದ ಯುವಕನಾಗಿದ್ದೆ. ನನ್ನ ಹಳ್ಳಿಯಲ್ಲೇ ಹುಟ್ಟಿದವನಾದ ಏಕಾಕ್ಷಿ ಕೂಡಾ ನನ್ನ ವಯಸ್ಸಿನವನೇ ಆಗಿದ್ದನು. ನಾವಿಬ್ಬರೂ ಒಂದೇ ಹಳ್ಳಿಯಲ್ಲಿ ಬೆಳೆದವರು.

ಆದರೆ ಬಾಲ್ಯದಿಂದಲೇ ಅವನಿಗೂ ನನಗೂ ಹಗೆತನವು ಬರುವಂತಹ ಘಟನೆಗಳು ನಡೆಯುತ್ತಿದ್ದುವು. ಸಣ್ಣ ಪುಟ್ಟ ಘಟನೆಗಳಿಗೆಲ್ಲ ಅವನು ನನ್ನ ಸ್ಪರ್ಧಾಳಾಗಿದ್ದನು. ಆ ಕಾಲದಲ್ಲಿ ಉಂಟಾದ ನಮ್ಮೊಳಗಿನ ಶತ್ರುಭಾವನೆಯೇ ಅನೇಕ ದುಷ್ಕಾರ್ಯಗಳಿಗೆ ದಾರಿಯಾಗಿ, ಕಡೆಗೆ ಈ ದ್ವೀಪವು ಮಾನವರ ವಾಸಕ್ಕೆ ಯೋಗ್ಯವಲ್ಲದಂತೆ ಮಾಡಿತು. ಆ ಕಾಲದಲ್ಲಿ ಏಕಾಕ್ಷಿ ನಿಜಕ್ಕೂ ಏಕಾಕ್ಷಿಯಾಗಿರಲಿಲ್ಲ. ಈ ದ್ವೀಪವನ್ನು ಸೇರಿದ ಮೇಲೆಯೇ ನನ್ನ ಬಂಟ ಉಲೂಕನಿಂದ ಅವನಿಗೆ ಏಕಾಕ್ಷಿತನ ಪ್ರಾಪ್ತವಾಗಿದೆ.

ಏಕಾಕ್ಷಿಯೂ ನಾನೂ ಒಂದೇ ಹಳ್ಳಿಯಲ್ಲಿ ಹುಟ್ಟಿದವರೆಂದು ಹೇಳಿದೆನಷ್ಟೆ ? ಅಲ್ಲಿ ನಮ್ಮಿಬ್ಬರ ಮನೆಗಳೂ ನೆರೆಹೊರೆಗಳಲ್ಲೇ ಇದ್ದುವು. ಮೊದಲಿನಿಂದಲೂ ನಮ್ಮೊಳಗೆ ಸ್ನೇಹಭಾವಕ್ಕಿಂತ ಶತ್ರುಭಾವವೇ ಇರಲು ನೆರೆಹೊರೆಗಳ ಮೇಲಾಟವೂ ಒಂದು ಕಾರಣವನ್ನು. ಆದರೆ ಅದು ತೀವ್ರದಶೆಗೆ ತಲಪಲು ಬಹಳ ಕಾಲ ಹಿಡಿಯಿತು.

ನಾನೂ ಏಕಾಕ್ಷಿಯೂ ನಮ್ಮ ಆರನೇ ವಯಸ್ಸಿನಿಂದ ದನಗಾಹಿಗಳಾಗಿ ಜೀವನವನ್ನು ಪ್ರಾರಂಭಿಸಿದೆವು. ನಮ್ಮ ಹಳ್ಳಿಯ ಹಿರಿಯನಾದ ಪತಂಗನ ಮೇಕೆಗಳನ್ನು ಅಡವಿಗಳಲ್ಲಿ ಮೇಯಿಸಿಕೊಂಡು ಬರುವುದು ನಮ್ಮ ವೃತ್ತಿಯಾಗಿತ್ತು. ಆಗ ನಾವು ಬಹಳ ಚಿಕ್ಕವರಾದುದರಿಂದ ಅಡವಿಯಲ್ಲಿ ಬೇಟೆಯಾಡುವ ಅರ್ಹತೆ ನಮಗೆ ಬಂದಿರಲಿಲ್ಲ. ವಯಸ್ಸು ಬಂದ ದೃಢಕಾಯರಾದವರು ಮಾತ್ರವೇ ಬೇಟೆಯಾಡಲು ಹೋಗುತ್ತಿದ್ದರು.

ಒಂದುದಿನ ನಾನೂ ಏಕಾಕ್ಷಿಯೂ ಮತ್ತೆ ಕೆಲವರು ಹುಡುಗರೂ ಮೇಕೆಗಳನ್ನು ಅಡವಿಗೆ ಹೊಡೆದುಕೊಂಡು ಹೋದೆವು. ಆ ಪ್ರಾಂತವೆಲ್ಲ






ಮರಗಿಡಗಳಿಂದ ದಟ್ಟವಾಗಿ ಕಿಕ್ಕಿರಿಸಿಕೊಂಡಿದ್ದಿತು. ಅಲ್ಲಿ ಹುಲಿ ಸಿಂಹಗಳು ಅಡಗಿಕೊಂಡಿರುತ್ತವೆ. ಪಶುಗಳನ್ನು ಮೇಯಿಸುವ ಹುಲುಸಾದ ಹುಲ್ಲು ಗಾವಲು ಅದರ ಪಕ್ಕದಲ್ಲೆಲ್ಲಾ ಹರಡಿದೆ. ನಡು ನಡುವೆ ಭಯಂಕರವಾದ ಕಾಡು.

ನಮ್ಮ ಮೇಕೆಗಳು ದೂರದ ಹುಲ್ಲುಗಾವಲಲ್ಲಿ ಮೇಯುತ್ತಿರಲು, ಕಾವಲಿಗರಾದ ನಾವೆಲ್ಲಾ ಒಂದು ಮರದ ಕೆಳಗೆ ಕುಳಿತಿದ್ದೆವು. ಇದ್ದಕ್ಕಿದ್ದ ಹಾಗೆ ಒಂದು ಸುಂದರವಾದ ಜಿಂಕೇಕರು ನನಗೆ ಸಂಬಂಧಿಸಿದ ಮೇಕೆಗಳ ಹತ್ತಿರ ಬಂದು ಕೂಗತೊಡಗಿತು. ಬಹುಃಶ ಅದು ತನ್ನ ತಾಯಿಯಿಂದ ಬೇರ್ಪಟ್ಟು ಹೀಗೆ ಬಂದಿರಬೇಕು.

ಆ ಜಿಂಕೆ ಕರುವನ್ನು ನೋಡಿದ ಕೂಡಲೇ, ಆದನ್ನು ಹಿಡಿದು ಪಳಗಿಸಬೇಕೆಂದು ನನಗೆ ತೋರಿ, ಹಾರಿಹಾರಿ ಓಡುತ್ತ ಅದರ ಹತ್ತಿರ ಹೋದೆ. ಅಷ್ಟರೊಳಗೆ ಏಕಾಕ್ಷಿ ಕೂಡಾ ಆ ಜಿಂಕೆಕರುವನ್ನು ನೋಡಿದ. "ನಾನೇ ಮೊದಲು ನೋಡಿದ್ದು. ಅದು ನನ್ನದು" ಎನ್ನುತ್ತ ನನ್ನ ಹಿಂದೆಯೇ ಅವನೂ ಓಡಿಬಂದ.

ನಾನು ಮಾತ್ರ ಮೊದಲು ಹೋಗಿ ಆ ಜಿಂಕೆ ಕರುವನ್ನು ಹಿಡಿದುಕೊಂಡೆ. ನನ್ನ ಹತ್ತರ ಇರುವ ಹಗ್ಗವನ್ನು ಅದರ ಕೊರಳಿಗೆ ಕಟ್ಟಿ ಎಳೆಯುವ ಪ್ರಯತ್ನದಲ್ಲಿದ್ದೆ. ಅಷ್ಟರಲ್ಲಿ ಏಕಾಕ್ಷಿ ಬಂದು, ಜಿಂಕೆಕರು ತನ್ನದೆನ್ನುತ್ತ ನನ್ನ ಮೇಲೆ ಬಿದ್ದು ಬಲಾತ್ಕಾರಕ್ಕೆ ತೊಡಗಿದ. ನಾನು ಒಂದು ಕಲ್ಲನ್ನೆತ್ತಿ ಅವನ ತಲೆಗೊಂದು ಕೊಟ್ಟೆ. ಕಿರುಚುತ್ತಾ ಏಕಾಕ್ಷಿ ನೆಲಕ್ಕೆ ಬಿದ್ದ.

ಇಷ್ಟರೊಳಗೆ ಜಿಂಕೆಕರು ಕುತ್ತಿಗೆಯ ಹಗ್ಗದೊಂದಿಗೆ ಓಡಿಹೋಗತೊಡಗಿತು. ನಾನೂ ಓಡುತ್ತ ಅದರ ಹಿಂದೆ ಬಿದ್ದೆ. ಮರಗಳ ಸಂದಿನಲ್ಲಿಯೂ, ಪೊದರುಗಳನ್ನು ಎಗರಿಯೂ ಓಡುತ್ತಾ ಅಂತೂ ಜಿಂಕೆಕರುವನ್ನು ಮತ್ತೆ ಹಿಡಿದೆ. ಆ ಸಮಯದಲ್ಲಿ ನಾನು ಬಳಲಿ ಹೋಗಿದ್ದೆನಾದುದರಿಂದ, ನನ್ನ ಕೈಯಿಂದ ತಪ್ಪಿಸಿಕೊಳ್ಳಲು ನೋಡುವ ಜಿಂಕೆಕರುವನ್ನು ಬಿಡದೆ ಅದರ ಕೊರಳ ಹಗ್ಗವನ್ನು ಹಿಡಿದು ಎಳೆಯುತ್ತಲೇ ಇದ್ದೆ.

ಆ ಪರಿಸ್ಥಿತಿಯಲ್ಲಿ ನನ್ನ ಗುಂಡಿಗೆ ನೀರಾಗುವ ಹಾಗೆ ಸಿಂಹದ ಗರ್ಜನೆಯೊಂದು ಕೇಳಿಸಿತು. ಆ ಶಬ್ದ ಬಹಳ ಸಮೀಪದಿಂದಲೇ ಹೊರಟಿತ್ತು! ನಾನು ಕ್ಷಣಮಾತ್ರದಲ್ಲಿ ಜಿಂಕೆಕರುವನ್ನು ಮರಕ್ಕೆ ಕಟ್ಟಿ, ಮರವನ್ನೇರಿ ಕೊಂಬೆಗಳ ಮೇಲೆ ಹೋದೆ.

ಮರದಕೊಂಬೆಯಲ್ಲಿ ತಕ್ಕ ಜಾಗೆ ಸೇರಿದ ಮೇಲೆ ನನ್ನ ಗುಂಡಿಗೆ ಸ್ತಿಮಿತಕ್ಕೆ ಬಂತು. ಆಗಷ್ಟೇ ನಾನು ಮಾಡಿದ ತಪ್ಪು ಅರ್ಥವಾದುದು. ಮರಕ್ಕೆ ಕಟ್ಟಲ್ಪಟ್ಟ ಜಿಂಕೆಕರು ಹಗ್ಗದಿಂದ ಬಿಡಿಸಿಕೊಳ್ಳಲು ಕುಣಿದಾಡುತ್ತ ಕೂಗುತ್ತಿತ್ತು. ಒಂದು ವೇಳೆ ಸಿಂಹವು ದೂರದಲ್ಲಿ ಹೋಗುತ್ತಿದ್ದರೂ ಅದರ

ಕೂಗನ್ನು ಕೇಳಿ ಖಂಡಿತಾ ಬರುವುದೆಂದು ತುಂಬಾ ಹೆದರಿದೆ. ಹೆದರುವುದೇನು ? ಒಂದೆರಡು ನಿಮಿಷದಲ್ಲೇ ಸಿಂಹ ಬಂದೇ ಬಂತು.!

ಮರದಕೊಂಬೆಯಲ್ಲಿರುವ ನನಗೆ ಪ್ರಾಣಭಯವಿರಲಿಲ್ಲ ನಿಜ. ಆದರೆ ಜಿಂಕೆಕರುವಿನ ಮೇಲೆ ಸಿಂಹ ಹಾರಿಬಿಟ್ಟಿತ್ತು ! ಆಗ ಅರಚುವ ಆ ಜಿಂಕೆಕರುವಿನ ಅವಸ್ಥೆ ನೋಡಿ ನಾನು ಸುಮ್ಮನಿರಲಾಗದೆ ಮರದ ಕೊಂಬೆಯೊಂದನ್ನು ಮುರಿದು ಸಿಂಹದ ಮೇಲೆ ಬೀಸಿ ಒಗೆದೆ. ಅದೂ ದೊಡ್ಡ ತಪ್ಪೇ ಆಯಿತು. ಆಗಲೇ ಸಿಂಹ ತಲೆ ಎತ್ತಿ ನನ್ನನ್ನು ನೋಡಿತು ! ಜಿಂಕೆಕರು ಅದರ ಅರ್ಧ ಹೊಟ್ಟೆಗಾದರೆ, ಪೂರ್ತಿ ಹೊಟ್ಟೆ ತುಂಬಲು ಮರದ ಮೇಲಿರುವ ನರಪ್ರಾಣಿ ಆಗುವನೆಂದುಕೊಂಡಿದೆ ಅದು !

ಸಿಂಹವು ಮೊದಲು ಜಿಂಕೆಕರುವನ್ನು ಕೊಂದು, ತಿನ್ನುವಂಥಾದ್ದೆಲ್ಲಾ ತಿಂದು ಮುಗಿಸಿತು. ತಿನ್ನುತ್ತಿರುವಾಗಲೇ ಮಧ್ಯೆ ಮಧ್ಯೆ ತಲೆಯೆತ್ತಿ ನನ್ನ ಕಡೆಗೆ ನೋಡುತ್ತಲೂ ಇತ್ತು. ಕಟ್ಟಕಡೆಗೆ ಅದು ನನ್ನನ್ನು ಹಿಡಿಯಬೇಕೆಂದು ಮೇಲಕ್ಕೆ ಸಾಧ್ಯವಾದಷ್ಟು ಎಗರ ತೊಡಗಿತು. ನಾನು ಇನ್ನಷ್ಟು ಮೇಲಿನ ಕೊಂಬೆಗೆ ಏರಿಕೊಂಡೆ.

ಆದರೂ ಸಿಂಹವು ತನ್ನ ಪ್ರಯತ್ನ ಬಿಡಲಿಲ್ಲ. ಸೂರ್ಯಾಸ್ತಮಾನ ಆಗುವವರೆಗೂ ಅದು ಮರದ ಕೆಳಗೆ ಗಟ್ಟಿ ಕಾವಲಾಗಿ ಕುಳಿತಿತು.

ಆ ರಾತ್ರಿ ಪೂರಾ ನಾನು ರೆಪ್ಪೆಗೆ ರೆಪ್ಪೆ ಹಚ್ಚದೆ ಮರದಕೊಂಬೆಗೆ ಅಂಟಿಕೊಂಡಿದ್ದೆ. ಬೆಳಗಾದ ಮೇಲೆ ಕೂಡಾ ನನಗೆ ಮರದಿಂದ ಇಳಿಯುವ ಧೈರ್ಯ ಬರಲಿಲ್ಲ. ಸಿಂಹವು ಮರದ ಕೆಳಗೆ ಕಾಣದಿದ್ದರೂ ಸಮೀಪದಲ್ಲೇ ಎಲ್ಲಿಯಾದರೂ ತಿರುಗಾಡಿಕೊಂಡಿದೆ ಎಂದು ನನಗೆ ಗೊತ್ತು. ಆಗಾಗ ದೂರದಿಂದ ಅದರ ಗರ್ಜನೆಯ ಧ್ವನಿ ಕೇಳುತ್ತಲೇ ಇದ್ದಿತು. ಹೀಗಾದರೆ ನಾನು ಹಸಿವೆ



ನೀರಡಿಕೆಗಳಿಂದ ಒಣಗಿ ನಿಶ್ಯಕ್ತನಾಗಿ ಮರದಿಂದ ಬಿದ್ದರೂ ಸಾವೇ ಗತಿ! ಸಾವಿನ ಅಂಜಿಕೆ ಭೂತ ದಂತೆ ನನ್ನನ್ನು ಹಿಡಿದಿತ್ತು.

ಸುಮಾರು ನಡು ಮಧ್ಯಾಹ್ನದ ಹೊತ್ತಿನಲ್ಲಿ ನನ್ನ ಕರ್ಣಪುಟಗಳು ಒಡೆದು ಹೋಗುವಹಾಗೆ ತಮಟೆಗಳ ಶಬ್ದ ಒಮ್ಮೆಗೇ ಕೇಳತೊಡಗಿತು. ಅದು ನಮ್ಮ ಹಳ್ಳಿಯ ಜನರು ನನ್ನನ್ನು ಹುಡುಕಿಕೊಂಡು ಬಂದಿದ್ದಾರೆಂಬುದರ ಸೂಚನೆಯಾಗಿತ್ತು. ನನ್ನ ಜತೆಗಾರರಾದ ಹುಡುಗರು ಕಾಡಿನೊಳಗೆ ಓಡಿದ ನಾನು ತಿರುಗಿ ಬರಲಿಲ್ಲವೆಂದು ಹಳ್ಳಿಯವರೊಂದಿಗೆ ಹೇಳಿರುತ್ತಾರೆ. ಅಂತಲೇ ಹೀಗೆ ಹುಡುಕುತ್ತಾ ಬಂದಿದ್ದಾರೆ! ಇದರಿಂದ ಬದುಕುವ ಆಸೆ ಚಿಗುರಿ ಸುತ್ತಿತ್ತು ನನ್ನಲ್ಲಿ.

ತಮ್ಮಟೆಗಳ ಧ್ವನಿ ಕ್ರಮವಾಗಿ ಸಮೀಪಿಸು ತ್ತಿತ್ತು. ಇನ್ನು ಮರವಿಳಿದು ಅವರ ಮುಂದೆ ಹೋಗಬಹುದೆಂದು ಎಣಿಸಿ, ಮೆಲ್ಲನೆ ಇಳಿಯಲೂ ತೊಡಗಿದೆ. ಒಮ್ಮೆಗೇ ನೆಲಕ್ಕಿಳಿದರೆ ಪೊದರಿನ ಹಿಂದೆ ಸಿಂಹವಿದ್ದರೆ ಏನುಗತಿ, ಎಂಬ ಅಂಜಿಕೆ ತಡೆಯಿತು. ಮನುಷ್ಯರ ಪ್ರಾಣ ಹೋಗಲು ಸಿಂಹದ ಒಂದೇಟೇ ಸಾಕು! ಅವರು ತೀರ ಹತ್ತಿರ ಬಂದ ಮೇಲೆಯೇ ಇಳಿಯುವುದು ಒಳಿತು.

ಈಟಿ, ಬರ್ಚಿ, ದೊಣ್ಣೆ, ಕೊಡಲಿ, ಕತ್ತಿ ಮುಂತಾದ ಆಯುಧಗಳನ್ನು ಧರಿಸಿದ ಸುಮಾರು ಐವತ್ತು ಜನ ನಮ್ಮ ಹಳ್ಳಿಯವರು ಕಾಡಿನೊಳ ಗೆಲ್ಲಾ ಮಾರ್ಮೊಳಗುವಂತೆ ಬೊಬ್ಬಿಡುತ್ತಾ ಬರು ತ್ತಿದ್ದರು. ಕೆಲವರು ತಮ್ಮಟೆಗಳನ್ನು ಹೊಡೆಯು ತ್ತಿದ್ದರು. ಅವರೆಲ್ಲಾ ನಾನಿರುವ ಮರಕ್ಕೆ ಸುಮಾರು ಐವತ್ತು ಗಜ ದೂರದ ವರೆಗೆ ಬಂದರು.

ಸಿಂಹವನ್ನು ಕುರಿತು ನಾನು ಅನುಮಾನಿಸಿದ್ದು ನಿಜವೇ ಆಯಿತು. ಪೊದೆಗಳ ಮರೆಯಲ್ಲಿ ಅಡಗಿದ್ದ ಆ ಸಿಂಹ ಹಠಾತ್ತನೆ ಅವರ ಮೇಲಕ್ಕೆ ಧುಮುಕಿತು.



ಇಂತಹ ಆಕಸ್ಮಿಕ ಅಪಾಯಗಳು ಬರುತ್ತವೆಂದು ಕೊಂಡು ತಕ್ಕ ಸಿದ್ಧತೆಯಲ್ಲೇ ಇದ್ದರು ನಮ್ಮ ಹಳ್ಳಿಯ ಬಂಟರು.

ಸಿಂಹವು ಮೇಲೆ ಹಾರಿದ ಕೂಡಲೇ ಅವರು ಹೆದರಿ ಚೆದರಿ ಹೋಗಲಿಲ್ಲ. ದೃಢಕಾಯನಾದ ಒಬ್ಬ ಯುವಕನು ಸಿಂಹದ ಪಂಜಾದ ಹೊಡೆತಕ್ಕೆ ತನ್ನ ಉದ್ದನ್ನ ಡಾಲನ್ನು ಒಡ್ಡಿ ತಡೆದನು. ಅದೇ ಸಮಯದಲ್ಲಿ ಮತ್ತೊಬ್ಬ ಯುವಕನು ಹಿಂದಿನಿಂದ ಅದನ್ನು ಬಿಗಿದು ಹಿಡಿದನು.

ಸಿಂಹವು ಗರ್ಜಿಸುತ್ತಾ ಹಿಂದಕ್ಕೆ ತಿರುಗಲು ನೋಡಿತು. ಅಷ್ಟರಲ್ಲಿ ಮೊದಲನೇ ಯುವಕನು ಬರ್ಚಿಯಿಂದ ಅದರ ಕುತ್ತಿಗೆಯ ಮೇಲೆ ಹೊಡೆದನು. ಪೆಟ್ಟು ತಿಂದ ಸಿಂಹ ರೋಷಾವೇಶ ದಿಂದ ಅರಚುತ್ತಾ ಮುಂದೆ ಹಾರಲು ನೋಡುವಾಗ ಬಾಲಹಿಡಿದ ಯುವಕನು ಕತ್ತಿಯಿಂದ ಅದರ ಬೆನ್ನಿನ ಮೇಲೆ ಹೊಡೆದನು.

ಸಿಂಹಕ್ಕೆ ದೊಡ್ಡ ದೊಡ್ಡ ಗಾಯಗಳಾದುವು. ಆ ಯುವಕರಿಬ್ಬರೂ ಸೇರಿ ಅದನ್ನು ತಮ್ಮ ಕೈಯಲ್ಲಿದ್ದ ಆಯುಧಗಳಿಂದ ಸಿಕ್ಕ ಸಿಕ್ಕ ಹಾಗೆ ಹೊಡೆಯುತ್ತಿರಲು, ಸಿಂಹವು ನೆಲದ ಮೇಲೆ ಉರುಳಿ ಹೊರಳಾಡ ತೊಡಗಿತು. ಮರದ ಕೊಂಬೆಯಲ್ಲಿದ್ದು ಇದನ್ನೆಲ್ಲಾ ನೋಡುತ್ತಿದ್ದ ನನಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಬೇಗ ಬೇಗನೇ ಮರದ ಕೊಂಬೆಗಳಿಂದ ಇಳಿದು ಬಂದು "ಓಹೋ!" ಎಂದು ದೊಡ್ಡ ದನಿಯಿಂದ ಕೂಗಿದೆ.

ಆ ಮರುಕ್ಷಣದಲ್ಲಿ ನಡೆದ ವಿಚಿತ್ರವನ್ನು ಕಣ್ಣೆದಿರೇ ನೋಡಿದ ನಾನೇ ನಂಬಲಾರದೆ ಹೋದೆನೆಂದರೆ, ಲೋಕದವರಾರೂ ನಂಬಲಾರರು. ನಾನು ಹಾಗೆ ಕೂಗಿದ ಕೂಡಲೇ ಎಲ್ಲರೂ ನನ್ನನ್ನು ನೋಡುತ್ತಾ ಗಕ್ಕನೆ ನಿಂತರು. ಆ ಕ್ಷಣದಲ್ಲಿ ತಮ್ಮಟೆ ಬಾರಿಸಿಕೊಂಡು ಮುಂದಿದ್ದ ಏಕಾಕ್ಷಿ "ದೆವ್ವೋ ದೆವ್ವಾ!" ಎಂದು ಕೆಟ್ಟದನಿಯಿಂದ ಅರಚಿ ಓಡ ತೊಡಗಿದನು. ಕಣ್ಣುಮುಚ್ಚಿ ಬಿಡಿಸುವುದರೊಳಗೆ ಉಳಿದವರು ಕೂಡಾ ಹೆದರಿ ಜೀವ ಬಿಡುವವರಂತೆ "ದೆವ್ವಾ! ದೆವ್ವಾ!" ಎಂದು ಕೂಗುತ್ತಾ ಓಡಿಬಿಟ್ಟರು. ಮತ್ತೆ ಆ ಸ್ಥಳದಲ್ಲಿ ನಾನೊಬ್ಬನೇ!

ಹೀಗೆ ಚತುರ್ನೇತ್ರನು ಹೇಳುತ್ತಿರಲು, ಬೆರಗಾಗಿ ಕೇಳಿಕೊಂಡಿದ್ದ ಸಮರಸೇನನು, "ಇದೆಂಥ ಆಶ್ಚರ್ಯ! ಎಂಥ ವಿಚಿತ್ರ! ಎಂಥ ಮಾಯಾಜಾಲ! ನಿನ್ನನ್ನು ನೋಡಿ ಅಷ್ಟು ಮಂದಿಯೂ ದೆವ್ವ ಎಂದು ನಂಬುವುದುಂಟೆ? ಒಬ್ಬನಿಗಾದರೂ ಬುದ್ಧಿಯಿಲ್ಲವೇ? ಅಷ್ಟು ಮೂಢರೇ?" ಎಂದನು.

ಚತುರ್ನೇತ್ರನು ಕೋಪದಿಂದ ಹಲ್ಲು ಕಡಿದು, "ಇದೆಲ್ಲಾ ಆ ಧೂರ್ತ ಏಕಾಕ್ಷಿ ಮಾಡಿದ ಮೋಸ! ಘಾತ! ಅವನು ನನ್ನನ್ನು ನೋಡಿ ದೆವ್ವ ಎಂದು ಓಡಿದ ಕೂಡಲೇ ಉಳಿದವರು ನನ್ನನ್ನು ಪರೀಕ್ಷಿಸಿ ನೋಡದೆ ಭಯಕಂಪಿತರಾಗಿ ಅವನನ್ನು ಅನುಸರಿಸಿದರೆಂದರೆ, ಅವನು ಹಾಗೆ ಅವರನ್ನು ನಂಬಿಸಿಟ್ಟಿದ್ದ. ಅಷ್ಟು ಚಿಕ್ಕ ವಯಸ್ಸಿನಲ್ಲಿಯೇ ಅವನು ಎಂಥ ಕಲ್ಮಷಬುದ್ಧಿಯವನೆಂಬುದು ಈ ಒಂದು ಸಂಘಟನೆಯಿಂದ ಗೊತ್ತಾಗುತ್ತದೆ. ನಮ್ಮ ಹಳ್ಳಿಯ ಚಿಕ್ಕವರನ್ನೂ ದೊಡ್ಡವರನ್ನೂ ನಾನು ಸತ್ತು ದೆವ್ವವಾದೆನೆಂದು ನಂಬಿಸಿಬಿಟ್ಟನು. ಅವರನ್ನು ಅವನು ಕಾಡಿಗೆ ಕರಕೊಂಡು ಬಂದದ್ದು ನಾನು ಸತ್ತ ಜಾಗನ್ನು ತೋರಿಸಲಿಕ್ಕೇ ಎಂದೂ, ಕಾಡು ಮೃಗವು ನನ್ನನ್ನು ಕೊಂದು ತಿಂದಿದೆಯೆಂದೂ ಅವನು ಹೇಳಿರಬೇಕು. ಆಮೇಲೆ ಹತ್ತು ವರ್ಷಗಳ ವರೆಗೆ ನಾನು ದೆವ್ವವಾಗಿಯೇ ಅಡವಿಯಲ್ಲಿ ತಿರುಗಿಕೊಂಡು ಬದುಕಬೇಕಾಗಿ ಬಂತು." ಎಂದನು.

(ಇನ್ನೂ ಇದೆ)






## ೧೦

[ಚತುರ್ನೇತ್ರನು ತನಗೂ ವಿಶಾಕ್ಷಿಗೂ ಬಾಲ್ಯದಿಂದಲೇ ವಿರೋಧ ಬೆಳೆದು ಬಂದ ಬಗೆಯನ್ನು ಹೇಳಿದನು. ಅವರಿಬ್ಬರೂ ಒಂದೇ ಊರಿನಲ್ಲಿ ಹುಟ್ಟಿ ಮೇಲಾಟದಿಂದ ಬೆಳೆಯುತ್ತ, ಒಂದು ಜಿಂಕೆ ಕರುವಿನ ಕಾರಣದಿಂದ ಚತುರ್ನೇತ್ರನು ವಿಶಾಕ್ಷಿಗೆ ಹೊಡೆದು, ಸಿಂಹದ ಭಯದಿಂದ ಮರದ ಮೇಲೆ ಏರಿದನು. ಚತುರ್ನೇತ್ರನು ಸತ್ತು, ದೆವ್ವವಾದಂತೆ ವಿಶಾಕ್ಷಿ ಎಲ್ಲರನ್ನೂ ನಂಬಿಸಿದನು.]

**ಈ** ರೀತಿಯಾಗಿ . ಚತುರ್ನೇತ್ರನು ಹೇಳುತ್ತಿದ್ದಾಗ, ಮುಂದಿನ ವಿವರಗಳನ್ನು ಹೇಳಲು ಸಾಧ್ಯವಾಗದಂತೆ ಎಲ್ಲಿಯೋ ಕೋಲಾಹಲ ಕೇಳ ತೊಡಗಿತು. ಸಮರ ಸೇನನಿಗೂ ಸೈನಿಕರಿಗೂ ಚತುರ್ನೇತ್ರನಿಗೆ ವಿಶಾಕ್ಷಿಯು ಮಾಯಾಜಾಲವು ಬಿದ್ದ ಗುಂಗಿನ ಕಥೆಯು ಅಂಕದ ಮೇಲೆ ಪರದೆ ಅಡ್ಡ ಬಿದ್ದಂತಾಯಿತು ಆ ಕೋಲಾಹಲ ಶಬ್ದ. ಅವರೆಲ್ಲ ತಲೆ ತಿರುಗಿಸಿ ಆ ಶಬ್ದವು ಎಲ್ಲಿಂದ ಬರುತ್ತಿದೆಯೆಂದು ಸುತ್ತಲೂ ನೋಡಿದರು. ದೂರ ದಿಂದ ಆ ಶಬ್ದ ಈಕಡೆಗೇ ಬರುವಂತಿತ್ತು. ಮತ್ತೊಮ್ಮೆ ಅದು ಬೇರೆ ದಿಕ್ಕಿಗೆ ಹೋಗುವಂತಿತ್ತು.

ಅಷ್ಟು ಹೊತ್ತಿಗೆ ಸೂರ್ಯನು ಅಸ್ತಮಿಸಿ ಬಿಟ್ಟಿದ್ದನು. ಕತ್ತಲೆ ಪೂರ್ತಿಯಾಗಿ ಇನ್ನೂ ತಲೆ ಹಾಕಲಿಲ್ಲ. ಆ ಗುಡ್ಡದ ಪ್ರಾಂತಗಳಲ್ಲಿ ಕರ್ರಗಿನ ಕತ್ತಲೆ ಮೆಲ್ಲಮೆಲ್ಲನೆ ಮುಸುಕು ಹಾಕುತ್ತಾ ಬರುತ್ತಿತ್ತು. ಗಾಳಿಯ ಹೊಯ್ದಾಟದೊಂದಿಗೆ ದೂರದಲ್ಲಿ ಮಾನವರ ಕೂಗಾಟದ ಹೊರತು, ಅವರು ಎಲ್ಲಿರುವರೆಂಬುದೂ ಯಾವ ಕಡೆಗೆ ಹೋಗು ತ್ತಿದ್ದಾರೆಂಬುದೂ ಸಮರಸೇನನಿಗೆ ಗೊತ್ತಾಗಲಿಲ್ಲ. ಅಷ್ಟರಲ್ಲಿ ಕೋಲಾಹಲವನ್ನು ಮೀರಿಸುವಂಥ ವಿಶಾಕ್ಷಿ ಮಾಂತ್ರಿಕನ ಉಚ್ಚದನಿಯ ಕಂಚು ಕಂಠಸ್ವರ, "ಕಾಲ




ಭುಜಂಗಾ ! ಹೇ ಕಪಾಲಾ ! ಬನ್ನಿ ಹೀಗೆ !" ಎಂಬ ಕೂಗು ಭಯಂಕರವಾಗಿ ಕೇಳಿಸಿತು.

ಚತುರ್ನೇತ್ರನು ಆ ಕಡೆಗೆ ಕಣ್ಣುಕ್ಕಿತ್ತಿ ನೋಡಿ, "ಸಮರಸೇನಾ ! ಎಲ್ಲಾ ತಿಳಿಯಿತು ! ಒಂದು ಕಡೆಯಿಂದ ನಿಮ್ಮ ಕುಂಡಲಿನೀ ದ್ವೀಪದ ಮನುಷ್ಯರೂ, ಎರಡನೇ ಕಡೆಯಿಂದ ಏಕಾಕ್ಷಿಯೂ ಬರುತ್ತಿದ್ದಾರೆ. ಈಗ ಅವರ ಸಂಗತಿ ಏನೂಂತ ನೋಡಬೇಕು. ನಾವೆಯ ಕಥೆಯನ್ನು ಆಮೇಲೆ ಹೇಳುತ್ತೇನೆ. ಪ್ರಸ್ತುತ ಈ ಕಡೆಗೆ ಬರುವವರ ಕಣ್ಣಿಗೆ ನಾವು ಬೀಳದಿರುವುದೇ ಒಳ್ಳೇದು. ಮರೆಯಲ್ಲೇ ಅವರ ಸಮಾಚಾರ ತಿಳಿದು ಆಮೇಲೆ ಅದಕ್ಕೆ ತಕ್ಕಂತೆ ಪ್ರವರ್ತಿಸೋಣ" ಎಂದನು.

ಸಮರನೇನನಿಗಾದರೂ ಸ್ವತಂತ್ರವಾಗಿ ಬೇರೇನು ಮಾಡಲಿಕ್ಕೂ ತೋರಲಿಲ್ಲ. ಬರುವವರು ಕುಂಡಲಿನೀ ದ್ವೀಪದ ಮನುಷ್ಯರೆಂದು ಚತುರ್ನೇತ್ರನ ಬಾಯಿಯಿಂದ ಹೊರಟ ಕೂಡಲೇ ದ್ರೋಹಿ ಕುಂಭಾಂಡನೇ ಅವನ ಮನಸ್ಸಿಗೆ ಕಂಡನು. ಅವನ ನಾಯಕತ್ವದಲ್ಲಿ ಇಲ್ಲಿಯ ಆಟವಿಕರೇ ಹೀಗೆ ಕೂಗಾಡಿಕೊಂಡು ಬರುತ್ತಿದ್ದಾರೆಂಬುದು ಅರ್ಥವಾಯಿತು ಅವನಿಗೆ. ಅಂತಲೇ ದುಡುಕಬಾರದೆಂದುಕೊಂಡನು.

"ಅಕ್ಕೋ ನೋಡು ! ಎಲ್ಲಾ ಇಲ್ಲಿಗೇ ಬರುತ್ತಿದ್ದಾರೆ ! ಗುಡ್ಡ ಏರುತ್ತಿದ್ದಾರೆ !" ಎಂದು ಚತುರ್ನೇತ್ರನು ತನ್ನ ಕೈ ಚಾಚಿ ತೋರುಬೆರಳನ್ನು ಗುಡ್ಡದ ಕೆಳಬದಿಗೆ ತೋರಿಸಿದನು. ಸಮರಸೇನನೂ ಸೈನಿಕರೂ ಅತ್ತ ನೋಡಿದರು. ಸುಮಾರು ಐವತ್ತು ಜನರ ಗುಂಪೊಂದು ದೀವಟಿಗೆಗಳನ್ನು ಬೆಳಗಿಸಿಕೊಂಡು ಏನೋ ಅರ್ಥವಾಗದಂತೆ ಕೂಗುತ್ತಾ ಮೇಲಕ್ಕೆ ಏರಿ ಬರುತ್ತಿದ್ದರು.

ಸಮರಸೇನನು ಕತ್ತಿಯ ಹಿಡಿಯ ಮೇಲೆ ಕೈ ಹಾಕಿ, "ಚತುರ್ನೇತ್ರಾ, ಈಗ ಮಾಡಬೇಕಾದ ಕರ್ತವ್ಯವೇನನ್ನುವೆ ? ಆ ಒಬ್ಬ ಕುಂಭಾಂಡನಾಗಿದ್ದರೆ ಈ ನನ್ನ ಸೈನಿಕರೊಂದಿಗೆ ಇದಿರಿಸಿ ಹತಮಾಡಬಹುದು. ಸುಶಿಕ್ಷಿತರಾದ ನನ್ನ ಸೈನಿಕರ ಬಾಣಗಳ ವೇಗಕ್ಕೆ ಆಟವಿಕರು ನಿಲ್ಲಲಾರರು. ಆದರೆ ಮಾಂತ್ರಿಕನಾದ ಏಕಾಕ್ಷಿಯನ್ನೇನು ಮಾಡಲಾದೀತು ? ಅವನನ್ನು ಪ್ರತೀಕರಿಸುವ ಶಕ್ತಿ ನಮಗಿಲ್ಲದೆ ಹೋಯಿತು. ಅದೇ ತಿಳಿಯುಲಿಲ್ಲ" ಎಂದನು.

"ಆ ಏಕಾಕ್ಷಿಯ ಸಂಗತಿ ನನಗಿರಲಿ. ಆದರೆ ಒಂದು ವಿಷಯ ನೆನಪಿಟ್ಟುಕೋ ! ನೀನು ಈ ಕಾಡು ಗುಡ್ಡ ಪ್ರದೇಶದಲ್ಲಿ, ಈ ಕತ್ತಲೆಯಲ್ಲಿ ಕುಂಭಾಂಡನನ್ನು ಇದಿರಿಸುವುದು ಒಳ್ಳೆಯದಲ್ಲ. ಒಂದು ವೇಳೆ ಆ ಕುಂಭಾಂಡನೂ, ಆಟವಿಕರೂ ಏಕಾಕ್ಷಿಯ ಕಣ್ಣಿಗೆ ಬಿದ್ದು ಬಿಟ್ಟರೆ ನೀನು ಮಾಡಬೇಕೆಂದಿರುವ ಶತ್ರುಸಂಹಾರವನ್ನು ಅವನೇ ಮಾಡಿಬಿಡುತ್ತಾನೆ. ಅಷ್ಟರವರೆಗೆ ನಾವು ಸುಮ್ಮನೆ ಅಡಗಿಕೊಂಡು ಪ್ರೇಕ್ಷಕರಾಗಿದ್ದರೆ ತೀರಿಹೋಯಿತು" ಎಂದನು ಚತುರ್ನೇತ್ರ.

ಅವನು ಹೇಳಿ ಮುಗಿಸುವಷ್ಟರಲ್ಲೇ, ಉತ್ಸಾಹ ದಿಂದ ಘೋಷವೆಬ್ಬಿಸಿಕೊಂಡು ಗುಡ್ಡವೇರಿಬರುವ ಆಟವಿಕರನ್ನೂ, ಅವರ ಮುಂದಿನಿಂದಿದ್ದ ಕುಂಭಾಂಡ ನನ್ನೂ ಮತ್ತೊಂದು ಕಡೆಯಿಂದ ಧಾವಿಸಿ ಬಂದ ಏಕಾಕ್ಷಿ ಮಾಂತ್ರಿಕನು, ಅಟಕಾಯಿಸಿ ನಿಂತು, "ನಿಲ್ಲಿರಿ !" ಎಂದು ಕರ್ಕಶವಾಗಿ ಅರಚಿದನು. ಅವನ ಅಬ್ಬರವು ಬಂಡೆಗಳೊಂದಿಗೆ ಪ್ರತಿಧ್ವನಿಸಿತು.

ಅದನ್ನು ನೋಡಿ ಸಮರಸೇನನು ಸಂತೋಷ ದಿಂದ, "ಆಹ ! ಇದೀಗ ಚೆನ್ನಾಗಿದೆ ! ಇನ್ನು ಕುಂಭಾಂಡನ ಗತಿ ಮುಗಿದಂತೆಯೇ ! ಈ ಕ್ಷಣವು ಯಾವಾಗ ಬರುವುದೋ ಅಂತಕಾದಿದ್ದೆ !" ಎಂದನು.

ಚತುರ್ನೇತ್ರನು ಅವನ ಸಂತೋಷವನ್ನು ಅಲ್ಲಗಳೆ ಯುತ್ತ, "ಸಮರಸೇನಾ, ಇಲ್ಲದ ಸಲ್ಲದ ಸಂತೋಷಕ್ಕೆ ಬಿದ್ದು ಬಿಡಬೇಡ. ಧನರಾಶಿಯಿಂದ ತುಂಬಿದ ನಾವೆ ಮತ್ತು ಅದರಲ್ಲಿರುವ ನಾಗಕನ್ಯೆಯ ವೃತ್ತಾಂತ ನಿನಗೆ ಸರಿಯಾಗಿ ತಿಳಿಯದು. ಅವುಗಳನ್ನು ಕುರಿತ ನಿಗೂಢ ರಹಸ್ಯವು ನಿನಗಿಂತ ಮೊದಲು ನನಗಾದರೂ ತಿಳಿಯುವಂತಿಲ್ಲ. ಈ ಏಕಾಕ್ಷಿ ದುಷ್ಟನಾದರೂ ಬುದ್ಧಿ ಹೀನನೇನಲ್ಲ. ಏನು ನಡೆಯುವುದೆಂದು ಹೊಂಚಿ ನೋಡೋಣ. ಬೇಗ ತಿಳಿದು ಬಿಡುತ್ತದೆ. ಆ ದೊಡ್ಡ ಬಂಡೆಯ ಹಿಂದೆ ಅಡಗಿರೋಣ, ಬನ್ನಿ, ಹೀಗೆ" ಎಂದನು.

ಎಲ್ಲರೂ ಸದ್ದು ಮಾಡದೆ ಚತುರ್ನೇತ್ರನ ಹಿಂದೆಯೇ ಹೋದರು. ಕುಂಭಾಂಡನೂ ಆಟವಿಕರೂ ಇರುವ ಸ್ಥಳಕ್ಕೆ ಸಮೀಪದಲ್ಲಿದ್ದ ಹೆಬ್ಬಂಡೆಯ ಹಿಂದಿನ ಭಾಗದಲ್ಲಿ ಅಡಗಿ ಕುಳಿತು ನಡೆಯುವುದ ನು ಗಮನಿಸ ತೊಡಗಿದರು. ಅವರ ದೀವಿಟಿಗೆಯ ಬೆಳಕಿನಲ್ಲಿ ಎಲ್ಲರೂ ಕಾಣಿಸುತ್ತಿದ್ದರು.

ಅಷ್ಟರಲ್ಲಿ ಏಕಾಕ್ಷಿ ಮಾಂತ್ರಿಕನನ್ನು ನೋಡಿದ ಕೂಡಲೇ ಕುಂಭಾಂಡನು ತುಂಬಾ ಹೆದರಿದವನಾಗಿ ಕಂಪಿಸಿಕೊಂಡಿದ್ದನು. ಅವನ ಹಿಂದಿದ್ದ ಆಟವಿಕರು ಕೂಡಾ ಭೀತಿಯಿಂದ ಓಡಿಹೋಗಲು ಹವಣಿಸು ವಂತೆ ಕಾಣುತ್ತಿತ್ತು. ಅದನ್ನು ಕಂಡುಕೊಂಡ ಏಕಾಕ್ಷಿ ಗಟ್ಟಿಯಾಗಿ ನಗುವನ್ನು ಹಾರಿಸಿ, "ಯಾರಾದರೂ






ನಿಂತ ಸ್ಥಳದಿಂದ ಕದಲಿದರೆ ಸತ್ತು ಬೀಳುವಿರಿ. ಜಾಗ್ರತೆ! ನನ್ನ ಕಣ್ಣಿಗೆ ಬಿದ್ದ ಪ್ರಾಣಿ ನನ್ನ ಅಪ್ಪಣೆ ಇಲ್ಲದೆ ಕದಲಾಡಲು ಸಾಧ್ಯವಿಲ್ಲ" ಎಂದು ತಲೆ ತಿರುಗಿಸಿ ನೋಡಿ, "ಹೇ! ಕಾಲಭುಜಂಗಾ! ಕಪಾಲಾ! ಇವರನ್ನು ಮುತ್ತಿ ನೋಡಿಕೊಳ್ಳಿ!" ಎಂದು ಕಿವಿಗಳು ಸೀಳುವಂತೆ ಕೂಗಿದನು.

ಆ ಕೂಡಲೇ ಕಾಲಭುಜಂಗ ಮಹಾಸರ್ಪವು ಮುಂದಕ್ಕೆ ಹಾರಿ ಭುಸ್ ಭುಸ್ ಎನ್ನುತ್ತ ಆಟವಿಕರ ಸುತ್ತಲೂ ಪ್ರದಕ್ಷಿಣೆ ಬರತೊಡಗಿತು. ಮಾನವ ಕಪಾಲವು ಗಾಳಿಯಲ್ಲಿ ಗಿರ್ರನೆ ತಿರುಗುತ್ತ ಅವರ ತಲೆಯ ಮೇಲೆ ಆಡಲು ತೊಡಗಿತು. ಭಯಾತಿಶಯದಿಂದ ಸರ್ವಾಂಗವೂ ನಡುಗುತ್ತಿದ್ದ ಕುಂಭಾಂಡನನ್ನೂ, ಆಟವಿಕರನ್ನೂ ಕೆಂಗಣ್ಣಿನಿಂದ ನೋಡುತ್ತ ಏಕಾಕ್ಷಿ "ಯಾರು ನೀವು? ಏನು ನಿಮ್ಮ ಗದ್ದಲ? ಎಲ್ಲಿಗೆ ಹೀಗೆ ಹೊರಟಿದ್ದು?" ಎಂದು ಕೇಳಿದನು.

ಆ ಪ್ರಶ್ನೆಯನ್ನು ಕೇಳಿ ಕುಂಭಾಂಡನಿಗೆ ಇನ್ನಷ್ಟು ಭಯವೇ ಕವಿಯಿತು. ಅವನಿಗೆ ನಿಜವೋ ಸುಳ್ಳೋ ಯಾವುದನ್ನು ಹೇಳಿ ತಪ್ಪಿಸಿಕೊಳ್ಳುವುದೆಂದು ಗೊತ್ತಾಗಲಿಲ್ಲ. ಈ ದ್ವೀಪದಲ್ಲಿರುವ ಮಾಂತ್ರಿಕರನ್ನು ಕುರಿತು ಅವನು ಆಟವಿಕರ ಮುಖಾಂತರದಿಂದ ಕೇಳಿದ್ದನೇ ಹೊರತು ನೋಡುವುದು ಇದೇ ಮೊದಲು! ಇವನು ಭೂತಭವಿಷ್ಯಗಳನ್ನೆಲ್ಲ ಬಲ್ಲವನಾದರೆ ಸುಳ್ಳು ಹೇಳಿದರೆ ಬೂದಿ ಮಾಡಿ ಹಾರಿಸಿ ಬಿಡುವನೇನೋ?

ಏನೋ ಹೇಳಲೇಬೇಕಾಗಿ ಬಂದುದರಿಂದ ಸ್ವರವು ತಡವರಿಸುತ್ತಿರಲು, "ಸತ್ಯವೇ ಹೇಳುತ್ತೇನೆ. ಈ ಆಟವಿಕರ ರಾಜ ನಾನು. ನನ್ನ ಹೆಸರು ಕುಂಭಾಂಡ" ಎಂದಷ್ಟೇ ಹೇಳಿದನು.

"ಈ ಪ್ರಯಾಣ ಎಲ್ಲಿಗೆ?" ಎಂದು ಪುನಃ ಕೇಳಿದನು ಏಕಾಕ್ಷಿ. ಈಗ ನಿಜ ಹೇಳದೆ ಗತ್ಯಂತರವಿಲ್ಲವೆನಿಸಿತು ಕುಂಭಾಂಡನಿಗೆ. ಒಂದು ವೇಳೆ ತಾನು ನಿಜವನ್ನು ಮುಚ್ಚಿಟ್ಟುಕೊಂಡರೂ, ಪ್ರಾಣಭಯದಲ್ಲಿರುವ ಆಟವಿಕರು ನಿಜವನ್ನು ಹೇಳಿಯೇ ಬಿಡುವರೆಂದು ಅವನಿಗೆ ತೋರಿತು.

"ಅದು ಮತ್ತೇನಿಲ್ಲ. ಈ ಗುಡ್ಡದ ಶಿಖರದಿಂದ ನೋಡಿದರೆ ಸಮುದ್ರದಲ್ಲಿ ಒಂದು ನಾವೆ ಕಾಣುತ್ತದಂತೆ. ಅದನ್ನು ಕುರಿತು ಎಲ್ಲರೂ ಆಶ್ಚರ್ಯಕರವಾಗಿ ಹೇಳುವುವನ್ನು ಕೇಳಿ. ಅದನ್ನು ನೋಡೋಣವೆಂದು ಹೊರಟಿದ್ದೇವೆ." ಎಂದನು ಕುಂಭಾಂಡ.

ಅವನು ಹೇಳಿದುದನ್ನು ಕೇಳಿ ಏಕಾಕ್ಷಿ ಗಟ್ಟಿಯಾಗಿ ನಕ್ಕನು. ಈ ಆಟವಿಕರನ್ನು ಕಟ್ಟಿಕೊಂಡು ಕುಂಭಾಂಡನು ಏಕೆ ಹೊರಟಿದ್ದಾನೆಂಬುದು ಗೊತ್ತಾಗಿ ಹೋಯಿತು.

"ಭಲೆ ಭಲೆ! ಈ ಕತ್ತಲೆಯಲ್ಲಿ ದೀವಟಿಗೆ ಹಚ್ಚಿಕೊಂಡು ಈ ಗುಡ್ಡದ ಶಿಖರವನ್ನೇರಿ ಸಮುದ್ರವನ್ನು ನೋಡುವಿರೇನು! ನಿನ್ನ ಬುದ್ಧಿವಂತಿಕೆ



ಅಪಾರವೇ ಸರಿ. ನಿನ್ನಂಥವನಿಗೆ ಈ ಅನಾಗರಿಕ ಕಾಡುಜನರ ಮೇಲೆ ರಾಜನೆಂಬ ಅಧಿಕಾರಕ್ಕಿಂತ, ದೇವತೆಗಳ ಮೇಲೆ ಅಧಿಕಾರ ಚಲಾಯಿಸುವ ಇಂದ್ರಪದವಿ ಮೇಲು. ನೀನು ಏತಕ್ಕಾಗಿ ಬಂದವನೆಂದು ನನಗೆ ಗೊತ್ತು. ಅದನ್ನು ನಿನ್ನ ಬಾಯಿಂದಲೇ ಕೇಳಬೇಕು. ಸತ್ಯ ಹೇಳು ! ನೀನು ಆ ನಾವೆಯಲ್ಲಿರುವ ಧನ ರಾಶಿಯನ್ನು ಬಾಚಿಕೊಳ್ಳುವ ಉದ್ದೇಶದಿಂದಲೇ ಬಂದವನೆನ್ನು ! ನಿಜತಾನೇ ?" ಎಂದನು ಏಕಾಕ್ಷಿ.

ಕುಂಭಾಂಡನು ಗದಗದಿಸುತ್ತಾ ನೆಲವನ್ನು ನೋಡುತ್ತಿರಲು, ಏಕಾಕ್ಷಿ ಗದರಿಸುತ್ತಾ " ಹೌದೋ ಅಲ್ಲವೋ ? ಬೇಗನೇ ಬೊಗಳಿಬಿಡು !" ಎಂದು ಗರ್ಜಿಸಿದನು.

" ಹೌದೂ..." ಎಂದನು ಕುಂಭಾಂಡ ನಡುಗುವ ಸ್ವರದಲ್ಲಿ. ಏಕಾಕ್ಷಿ ತೃಪ್ತಿಯಿಂದ ತಲೆಯಾಡಿಸಿ, " ಹೂಂ ! ಈ ದ್ವೀಪದಲ್ಲಿ ಕೆಲವು ದಿನಗಳ ಕೆಳಗೆ ಐದಾರು ಮಂದಿ ಹೊಸಬರನ್ನು ನೋಡಿದ್ದೇನೆ. ಅವರ ವೇಷಭೂಷಣಗಳು ಕೂಡಾ ನಿನ್ನ ಹಾಗೇ ಇದ್ದುವು. ಅವರು ಕೂಡಾ ನಿನ್ನ ಹಾಗೇ ಆ ನಾವೆಯ ಐಶ್ವರ್ಯವನ್ನು ದೋಚಿಕೊಳ್ಳಲಿಕ್ಕೇ ಬಂದಿರಬೇಕು. ಅಥವಾ ನೀನು ಆ ಗುಂಪಿಗೆ ಸೇರಿದವನೇನೋ ? ಗೊತ್ತೋ ನಿನಗೆ ಅವರು ? ಎಲ್ಲಾ ಎಲ್ಲಿಂದ ಬಂದಿದ್ದೀರಿ ? ಈ ನಾವೆಯ ಸಂಗತಿ ನಿಮಗೆ ಹೇಗೆ ಗೊತ್ತಾಯಿತು ?" ಎಂದು ಕೇಳಿದನು.

ಏಕಾಕ್ಷಿಯ ಈ ಮಾತಿನಿಂದ ಆ ಮನುಷ್ಯರು ಯಾರೆಂಬುದು ಕುಂಭಾಂಡನಿಗೆ ಗೊತ್ತಾಯಿತು. ತನಗಿಂತ ಮೊದಲು ಕುಂಡಲಿನೀ ದ್ವೀಪ ರಾಜ್ಯದಿಂದ ಹೊರಟ ಸಮರಸೇನನೂ ಸೈನಿಕರೂ ಹೊರತು ಅವರು ಬೇರೆ ಯಾರೂ ಅಲ್ಲ. ಅವರನ್ನು ಈ ಮಂತ್ರವಾದಿ ಏನಾದರೂ ಮಾಡಿರಬೇಕು. ಅದೇ ಗತಿ ತನಗೂ ಆಗುತ್ತದೋ ? ತಪ್ಪಿಸಿಕೊಳ್ಳಬೇಕು.

" ಅಲ್ಲ, ನಾನು ಆ ಗುಂಪಿಗೆ ಸೇರಿದವನೇನೂ ಅಲ್ಲ. ಆದರೆ ಅವರಕ್ಕೆ ಯಾರೆಂಬುದು ನನಗೆ ಗೊತ್ತಿದೆ. ಅವರು ಈ ದ್ವೀಪದಲ್ಲಿರುವುದನ್ನು ತಿಳಿದು ಅವರನ್ನು ಅಂತ್ಯಗೊಳಿಸಲಿಕ್ಕಾಗಿಯೇ ನಾನು ಬಂದೆನು. ಧನಾಶೆ ತುಂಬಿದವರಾದ ಆ ದ್ರೋಹಿಗಳು ಆ ನಾವೆಯನ್ನು ಹುಡುಕುತ್ತಿರಬಹುದೆಂದು ತಿಳಿದೇ ನಾನು ಇಲ್ಲಿಗೆ ಬಂದೆನು. ದಾರಿಯಲ್ಲಿ ನಿಮ್ಮನ್ನು ಸಂಧಿಸುವ ಭಾಗ್ಯ ದೊರೆಯಿತು " ಎಂದು ಕುಂಭಾಂಡನು ತಂತ್ರದಿಂದ ನಿಜವನ್ನು ಬಚ್ಚಿಟ್ಟೇ ಹೇಳಿದನು.

ಈ ಸಂಭಾಷಣೆಗಳನ್ನು ಅಡಗಿಕೊಂಡು ಕೇಳುತ್ತಿದ್ದ ಚತುರ್ನೇತ್ರನು ಇದೇ ಸರಿಯಾದ ಸಮಯವೆಂದು ಕೊಂಡು, " ಹೇ ಉಲೂಕಾ ! ನರವಾನರಾ !" ಎಂದು ಗಟ್ಟಿಯಾಗಿ ಕೂಗುತ್ತ ಬಂಡೆಯ ಮರೆಯಿಂದ ಈಚೆಗೆ ಬಂದನು. ಬರುತ್ತಾ " ಹೂಂ ! ಇದೇ ಸಮಯ !" ಎಂದು ಸಮರಸೇನನಿಗೂ ಸನ್ನೆಮಾಡಿದನು.



ಆ ಕೂಡಲೇ ಸಮರಸೇನನೂ ಸೈನಿಕರೂ ಬಿಲ್ಲಿಗೆ ಬಾಣ ಹೂಡಿ ಕುಂಭಾಂಡನ ಮೇಲೆಯೂ, ಆಟವಿಕರ ಮೇಲೆಯೂ ಪರಂಪರೆಯಾಗಿ ಬಾಣ ಬಿಡ ತೊಡಗಿದರು.

ಚತುರ್ನೇತ್ರನ ಸದ್ದು ಕೇಳುತ್ತಲೇ ಏಕಾಕ್ಷಿ ಬೆರಗಾಗಿ ಸುತ್ತಲೂ ನೋಡಿದನು. ಆಗಲೇ ಬಾಣ ಗಳಿಂದ ಪೆಟ್ಟುತಿಂದ ಕೆಲವರು ಆಟವಿಕರು ನೆಲಕ್ಕೆ ಹೊರಳಿದರು. ಕುಂಭಾಂಡನು ನಿಂತಲ್ಲಿಂದ ಕಪ್ಪೆಯಂತೆ ಹಾರಿ ಗುಡ್ಡ ಇಳಿದು ಓಡ ತೊಡಗಿದನು. ಸಮರ ಸೇನನು ಅವನ ಬೆನ್ನು ಹತ್ತಿದನು. ಪ್ರಾಣ ಭಯ ದಿಂದ ಓಡುವ ಆಟವಿಕರನ್ನು ಸೈನಿಕರು ಬೆಂಬತ್ತುತ್ತ ಬಾಣಗಳನ್ನು ಮೇಲಿಂದ ಮೇಲೆ ಬಿಡುತ್ತಲೇ ಇದ್ದರೂ, ಕತ್ತಲೆಯಾದುದರಿಂದ ಗುರಿ ಸರಿಯಾಗಿ ತಗಲುತ್ತಿರಲಿಲ್ಲ. ಕುಂಭಾಂಡನು ಕತ್ತಿ ಝಳಪಿಸುತ್ತ ತನ್ನ ಕಡೆಯ ಆಟವಿಕರನ್ನು ನೋಡಿ "ನಿಲ್ಲಿರಿ! ಓಡಬೇಡಿ!" ಎಂದು ಕೂಗಲು ತೊಡಗಿದನು.

ಇಲ್ಲಿ ಉಲೂಕದ ಹೆಸರು ಕೇಳಿ ದಿಗಿಲು ಬಿದ್ದ ಏಕಾಕ್ಷಿ ಮಾಂತ್ರಿಕನು, ಧೈರ್ಯದಿಂದ ಸ್ತಿಮಿತಕ್ಕೆ ಬಂದು, ಕತ್ತಿ ತಿರುಗಿಸುತ್ತ, ಸ್ವಲ್ಪ ಸ್ವಲ್ಪ ಮುಂದಕ್ಕೆ ಬರುತ್ತ, "ಎಲೋ ಚತುರಾ! ನೀನೊಬ್ಬ ಮೂಢ ನೆಂಬುದು ಈಗ ಗೊತ್ತಾಗಿ ಹೋಯಿತು. ಮಂತ್ರ ತಂತ್ರ ವಿದ್ಯೆಗಳಲ್ಲಿ ಲೋಕದಲ್ಲೇ ನಿನ್ನನ್ನು ಮಿಂಚಿ ದವರಿಲ್ಲವೆಂಬ ಗರ್ವದಿಂದ, ಈ ತುಚ್ಛ ಮಾನವಾ ಧಮರ ಬಾಣಗಳಿಂದ ನನ್ನನ್ನು ಜಯಿಸಲು ನೋಡುವೆಯಾ? ನಾನು ಹೂಂ ಅಂದರೆ ಸಾಕು. ನಿನ್ನ ಮಿತ್ರರೆಲ್ಲರನ್ನೂ ಕಡಿದು ಹಾಕಲು ಈ ಆಟವಿಕರೇ ಸಾಕು" ಎಂದನು.

ಚತುರ್ನೇತ್ರನು ರೆಪ್ಪೆ ಬಡಿಯದೆ ಏಕಾಕ್ಷಿಯನ್ನು ನೋಡುತ್ತ ಸುಮ್ಮನಿದ್ದನು. ಗುಡ್ಡದ ಕೆಳಗೆ ಕುಂಭಾಂಡನ ಕೂಗೂ, ಆಟವಿಕರ ಕೋಲಾಹಲ ಧ್ವನಿಯೂ ಜೋರು ಜೋರಾಗಿ ಕೇಳಿ ಬರತೊಡಗಿತು. ಈ ಕತ್ತಲೆಯಲ್ಲಿ ಹೋರಟರ ನಡುವೆ ಸಮರಸೇನನಿಗೆ ಏನಾದರೂ ಅಪಾಯ ಬರಬಹುದೇನೋ ಎಂದು ತೋರಿತು ಚತುರ್ನೇತ್ರನಿಗೆ.

"ಏಕಾಕ್ಷೀ! ನಿನ್ನ ಪೊಗರಿನ ಮಾತುಗಳಿಗೆ ಉತ್ತರ ಹೇಳುವಷ್ಟು ವ್ಯವಧಾನ ನನಗಿಲ್ಲ. ಅಷ್ಟೇ ಹೊರತು ನಮ್ಮ ಭೃತ್ಯಗಳ ನಡುವೆ ನಡೆಯುವ ಹೋರಾಟ ದಿಂದ ಬರುವ ಫಲಿತವೂ ಏನೂ ಇಲ್ಲ. ನಿನ್ನ ಕತ್ತಿ ಕಠಾರಿಗಳಾವುದೂ ನನ್ನನ್ನು ಏನೂ ಮಾಡಲಾರ ವೆಂದು ನಿನಗೆ ಗೊತ್ತೇ ಇದೆ. ಒಂದು ದಿನ ಬಂದೇ ಬರುತ್ತೆ. ಅಂದು ನೀನೋ ನಾನೋ ಎಂಬುದು ನಿರ್ಧಾರವೂ ಆಗುತ್ತೆ!" ಎಂದನು ಗಂಭೀರವಾಗಿ ಚತುರ್ನೇತ್ರ.

ಮತ್ತೊಂದು ಕ್ಷಣದಲ್ಲಿ ಚತುರ್ನೇತ್ರನ ಕೈ ಅವನ ತಲೆಯ ಕುಚ್ಚು ಟೋಪಿಯನ್ನು ಮುಟ್ಟಿತು, ಮರು ಕ್ಷಣದಲ್ಲಿ ಚತುರ್ನೇತ್ರನು ಅಲ್ಲಿ ಮಾಯವಾಗಿ, ಸಮರಸೇನನೂ, ಕುಭಾಂಡನೂ ಕಾದಾಡುವಲ್ಲಿ

ಪ್ರತ್ಯಕ್ಷನಾದನು. ಅಲ್ಲಿ ದಾರುಣವಾದ ರಣ ನಾಟಕ ನಡೆಯುತಲಿದ್ದಿತು, ಆಟವಿಕರು ಈಟಿ, ಭಲ್ಲೆಗಳನ್ನು ಬೀಸುತ್ತ ಮುಂದೆ ಬರಲು ನೋಡುತ್ತಿದ್ದರು. ಸಮರಸೇನನ ಸೈನಿಕರು ತಮ್ಮ ಬಾಣಗಳಿಂದ ಅವರನ್ನು ಮುಂದಕ್ಕೆ ಬಾರದಂತೆ ತಡೆಯುತ್ತಿದ್ದರು.

ಈ ಪರಿಸ್ಥಿತಿಯಲ್ಲಿ ಸಮರಸೇನನೂ, ಕುಂಭಾಂಡನೂ ಆ ಯುದ್ಧರಂಗದ ಮಧ್ಯದಲ್ಲಿ ತಮ್ಮೊಳಗೆ ದ್ವಿದ್ವ ಯುದ್ಧ ಮಾಡುತ್ತಿದ್ದರು. ಆ ಹೊತ್ತಿಗೆ ಚಂದ್ರೋದಯವಾಗಿ ಆ ಪ್ರಾಂತವು ವಿಚಿತ್ರ ಬೆಳಕಿನಿಂದ ತುಂಬಿಕೊಂಡಿತು.

ಚತುರ್ನೇತ್ರನು ಸ್ವಲ್ಪ ದೂರದಲ್ಲಿ ನಿಂತು, ಈಗ ಏನು ಮಾಡುವುದೆಂದು ಆಲೋಚಿಸಿದನು. ಕುಂಭಾಂಡನನ್ನು ತನ್ನ ವಶಪಡಿಸಿಕೊಳ್ಳುವ ಆಲೋಚನೆಯಿಂದ ಏಕಾಕ್ಷಿ, ಕುಂಭಾಂಡನನ್ನು ರಕ್ಷಿಸಲು ಈ ಕಡೆಗೆ ಬರಬಹುದೆಂಬ ಅನುಮಾನವು ಚತುರ್ನೇತ್ರನಿಗೆ ಬಂದಿತು. ಆದುದರಿಂದ ಅವನು ಇಲ್ಲಿಗೆ ಬರುವುದಕ್ಕೆ ಮೊದಲೇ ಕುಂಭಾಂಡನನ್ನೂ, ಆಟವಿಕರನ್ನೂ ಹತ ಮಾಡಿ ಬಿಡುವುದೇ ಒಳ್ಳೆಯದೆಂದುಕೊಂಡನು. ಒಂದು ವೇಳೆ ಇದು ಸಾಧ್ಯವಾಗದಿದ್ದರೆ, ಸಮರಸೇನನನ್ನೂ ಅವನ ಸೈನಿಕರನ್ನೂ ಆ ಪ್ರದೇಶದಿಂದ ಇನ್ನೊಂದು ಸುರಕ್ಷಿತ ಪ್ರದೇಶಕ್ಕೆ ಕರೆದೊಯ್ದು ಬಿಡಬೇಕು. ಚತುರ್ನೇತ್ರನು ಹೀಗೆ ಆಲೋಚಿಸಿಕೊಂಡು ಏನೋ ಮಾಡಬೇಕೆನ್ನುವಷ್ಟರಲ್ಲಿ, ಭಯಂಕರವಾಗಿ ತೋಳಗಳ ಕೂಗಾಟಗಳು ಕೇಳಬಂದುವು. ಬೆಳುದಿಂಗಳ ರಾತ್ರಿಯಲ್ಲಿ ಆಹಾರಾನ್ವೇಷಣೆಗೆ ಹೊರಬಂದ ತೋಳಗಳ ಗುಂಪೊಂದು ಇಲ್ಲಿಯ ರಕ್ತದ ವಾಸನೆ ಹಿಡಿದು ಈಕಡೆಗೆ ಬರುತ್ತಿತ್ತು.

ತೋಳಗಳ ಹಿಂಡು ಅರಚುತ್ತಾ, ಬಂಡೆಗಳ ಮೇಲಿಂದ ಹಾರುತ್ತಾ, ಪೊದರುಗಳಾಚೆಯಿಂದ ಓಡುತ್ತಾ ತಮ್ಮ ಕಡೆಗೆ ಬರುವುದನ್ನು ಎಲ್ಲರೂ ನೋಡಿದರು.

ಹಸಿದ ಆ ತೋಳಗಳು ತಮ್ಮನ್ನೇ ಕೊಲ್ಲುವುದೆಂಬ ಹೊಸ ಭೀತಿ ಎಲ್ಲರಿಗೂ ಉಂಟಾಯಿತು. ಆ ಕೂಡಲೇ ಹೋರಾಡಿಕೊಂಡಿದ್ದ ಆಟವಿಕರೂ ಸೈನಿಕರೂ ಅಲ್ಲಿಂದಲ್ಲೇ ತೋಳಗಳ ವಿರುದ್ಧವಾದ ದಿಕ್ಕಿಗೆ ಓಡತೊಡಗಿದರು.

ಸಮರಸೇನನೂ ಕುಂಭಾಂಡನೂ ತಮ್ಮೊಳಗಿನ ಯುದ್ಧವನ್ನು ನಿಲ್ಲಿಸಿ ತಮ್ಮ ಅನುಚರರು ಓಡುವ ದಿಕ್ಕನ್ನೇ ಹಿಡಿದು ಓಡತೊಡಗಿದರು. 'ಬೀಸುವ ದೊಣ್ಣೆಯ ಏಟು ತಪ್ಪಿದರೆ ಸಾಸಿರ ವರ್ಷ ಆಯುಸ್ಸು' ಎಂಬ ಹಾಗೆ ತೋಳಗಳು ಅಲ್ಲಿಯ ವರೆಗೆ ಬಂದರೆ, ಅಲ್ಲಿ ಬಿದ್ದಿದ್ದ ಶವಗಳ ರಕ್ತದಿಂದ ಅಲ್ಲಿಯೇ ಉಳಿದು, ತಮ್ಮ ಬೆನ್ನು ಹತ್ತಲಾರವೆಂದು ಓಡಿದವರಿಗೆಲ್ಲಾ ತೋರಿತ್ತು. (ಇನ್ನೂ ಇದೆ)






## ೧೧

[ಚತುರ್ನೇತ್ರನೂ ಸಮರಸೇನಾದಿಗಳೂ ಗುಡ್ಡದ ಮೇಲಿರುವಾಗ, ಅಲ್ಲಿಗೇ ಬರುತ್ತಿದ್ದ ಕುಂಭಾಂಡನನ್ನೂ ಅವನ ಜತೆಯ ಆಟವಿಕರನ್ನೂ, ಮತ್ತೊಂದು ಕಡೆಯಿಂದ ಬಂದ ಏಕಾಕ್ಷಿ ಮಾಂತ್ರಿಕನು ಅಡ್ಡಗಟ್ಟಿದನು. ಆಗಲೇ ಸಮರಸೇನನೂ, ಕುಂಭಾಂಡನ ಮೇಲೆ ಧಾವಿಸಿ ಬಿದ್ದನು. ದೊಂಬಿಯುದ್ಧದಲ್ಲಿ ಕೆಲವರು ಸಾಯಲು, ತೋಳಗಳ ಗುಂಪು ಅಲ್ಲಿಗೆ ಓಡಿ ಬರುವುದನ್ನು ತಿಳಿದು ಎಲ್ಲರೂ ಓಡಿದರು.]

**ಸ**ಮರಸೇನನೂ ಅವನ ಸೈನಿಕರೂ ಸ್ವಲ್ಪ ದೂರದ ವರೆಗೆ ಓಡಿದರು. ಕುಂಭಾಂಡನ ಕಡೆಯ ಆಟವಿಕರ ಕೂಗು ದೂರ ದೂರವಾದುದನ್ನು ನೋಡಿ, ತಮ್ಮ ದಿಕ್ಕಿನಲ್ಲಿ ಅವರಿಲ್ಲವೆಂದು ಸಮರಸೇನಾದಿಗಳಿಗೆ ಗೊತ್ತಾಗಿ ತುಸುಧೈರ್ಯ ಬಂದಿತು. ಓಡುತ್ತಾ ಆಯಾಸದಿಂದ ಒಂದು ಕಡೆಯಲ್ಲಿ ಸ್ವಲ್ಪ ಶ್ವಾಸ ಬಿಡುತ್ತಾ, ನಿಂತು ಸುತ್ತಲೂ ಗಮನಿಸತೊಡಗಿದರು. ತೋಳಗಳು ಹೋರಾಟದಲ್ಲಿ ಸತ್ತವರನ್ನು ತಿಂದು ತೀರಿಸುವುದರಲ್ಲಿ ಮಗ್ನವಾದುದರಿಂದ ಇನ್ನು ಅವು ತಮ್ಮನ್ನು ಅನುಸರಿಸಿ ಬರಲಾರವೆಂದು ದೃಢವಾಯಿತು. ಕುಂಭಾಂಡನೂ ಅವನ ಕಡೆಯ ಆಟವಿಕರೂ ತೋಳಗಳಿಂದ ತಪ್ಪಿಸಿಕೊಂಡು ಗುಡ್ಡದ ಕೆಳಗಿನ ಅಡವಿಯ ಕಡೆಗೆ ಓಡುತ್ತಿರುವಂತೆ ಅವರ ಸದ್ದು ಆ ಕಡೆಗೆ ದೂರ ದೂರ ಹೋಗುತಿತ್ತು. ಆದರೆ ಏಕಾಕ್ಷಿ ಮಾಂತ್ರಿಕನೂ, ಚತುರ್ನೇತ್ರನೂ ಎತ್ತ ಮಾಯವಾದರೆಂದು ಗೊತ್ತಾಗಲಿಲ್ಲ. ತೋಳಗಳು ಮಾತ್ರ ಒಂದೇ ಕಡೆಯಲ್ಲಿ ಕೂಗುತ್ತಿರುವುದು ಕೇಳುತ್ತಿತ್ತು. ಹಾಗಾದರೆ ಮಾಂತ್ರಿಕರಿಬ್ಬರೂ ಒಬ್ಬರನ್ನೊಬ್ಬರು ಭಂಗಿಸುವುದರಲ್ಲಿ ಮಗ್ನರಾಗಿ ಬಹುದೆ ? ಸದ್ಯ ಭಯವಿಲ್ಲವೆಂದು ತಿಳಿದ ಮೇಲೆ



ಸಮರಸೇನನೂ, ಸೈನಿಕರೂ ಒಂದು ಮರದಬುಡದಲ್ಲಿ ಕುಳಿತರು. ಸಮರಸೇನನ ತಲೆಯಲ್ಲಿ ಆಲೋಚನೆ ಹರಿಯಿತು. ಕುಂಭಾಂಡನು ಕೂಡಾ ಧನರಾಶಿಯ ನಾವೆಯನ್ನು ವಶಪಡಿಸಿಕೊಳ್ಳಬೇಕೆಂದು ಗಟ್ಟಿ ಪ್ರಯತ್ನಮಾಡುತ್ತಿದ್ದಾನೆಂದು ಅರ್ಥವಾಯಿತು. ಈಗ ಆ ನಾವೆಯನ್ನು ಹೊಂಚುಹಾಕುವವರು ತಾನೊಬ್ಬ, ಕುಂಭಾಂಡನಿನ್ನೊಬ್ಬ, ಮೂರನೆಯವನು ಏಕಾಕ್ಷಿ. ನಾಲ್ಕನೆಯವನು ಚತುರ್ನೇತ್ರ, ಹೀಗೆ ನಾಲ್ವರಾಯಿತು! ಇದರಲ್ಲಿ ತನಗೆ ಜಯವಾಗ ಬೇಕಾದರೆ ಮೊದಲು ಕುಂಭಾಂಡನನ್ನೇ ನಿವಾರಿಸ ಬೇಕೆಂದು ಸಮರಸೇನನಿಗೆ ತೋರಿತು.

ಸಮರಸೇನನು ಹೀಗೆ ಆಲೋಚಿಸಿಕೊಂಡಿರಲು, ಅವನ ಸೈನಿಕರು ಮಾತ್ರ ಎಷ್ಟು ಬೇಗ ತಮ್ಮ ದ್ವೀಪಕ್ಕೆ ಹೋಗುತ್ತೇವೋ, ಅದಕ್ಕೆ ದಾರಿ ಯಾವುದೋ ಎಂಬ ಚಿಂತೆಯಿಂದ, ಬಾಯಿಬಿಟ್ಟು ಹೇಳಲಾಗದೆ ಮಿಡುಕಿಕೊಂಡಿದ್ದರು.

ಕಡೆಗೆ ಒಬ್ಬನು ಧೈರ್ಯಮಾಡಿ ಬಾಯಿತೆರೆದು, "ಸೇನಾನೀ ದೊರೆಗಳೇ, ನಾವು ಈ ಭಯಂಕರ ದ್ವೀಪವನ್ನು ಎಷ್ಟುಬೇಗ ಬಿಟ್ಟು ಹೋದರೆ ಅಷ್ಟು ಒಳ್ಳೆಯದು. ಅದಕ್ಕೆ ತಕ್ಕ ಪ್ರಯತ್ನ ಮಾಡ ಬೇಕಾಗಿದೆ. ಇಲ್ಲಿ ಹೊತ್ತು ಕಳೆದಷ್ಟೂ ಏನೇನೋ ಅಪಾಯಗಳು ಎದುರಾಗುತ್ತವೆ" ಎಂದನು.

"ಹೌದೌದು" ಎಂದು ಗಂಟಲಲ್ಲೇ ಹೇಳುತ್ತ ಉಳಿದವರೂ ತಲೆಯಾಡಿಸಿದರು. ಅವರ ಮನಸ್ಸನ್ನು ಅರ್ಥ ಮಾಡಿಕೊಂಡ ಸಮರಸೇನನು "ಅದೇನೋ ನಿಜವೇ ಆದರೂ ಅವಸರ ಪಟ್ಟರೆ ಏನೂ ಆಗದು. ಈ ದ್ವೀಪದಿಂದ ಹೊರಟು ಹೋಗುವುದೇ ಮುಖ್ಯ ವೆಂಬುದನ್ನು ಯಾವಾಗಲೋ ನಿರ್ಧರಿಸಿದ್ದೇವೆ. ಈಗ ಈ ಸ್ಥಳದಲ್ಲಿ ಇರುವುದು ಕೂಡಾ ಆ ಪ್ರಯತ್ನದಲ್ಲೇ ತಾನೇ ? ಅದನ್ನು ಕುರಿತು ಪದೇ ಪದೇ ಯೋಚಿ ಸುವುದರಲ್ಲಿ ಪ್ರಯೋಜನವಿಲ್ಲ. ಅಸಲು ಪ್ರಶ್ನೆ ಈ ದ್ವೀಪವನ್ನು ಬಿಟ್ಟು ಹೋಗಲು ದಾರಿ ಯಾವುದು ಎಂಬುದೇ. ಅದಿನ್ನೂ ನಮಗೆ ಸಿಕ್ಕಿಲ್ಲವಲ್ಲಾ ? ಯಾವ ದಿಕ್ಕಿಗೆ ಹೋದರೆ ಒಳ್ಳೆಯದೆಂಬುದನ್ನು ನೀವಾದರೂ ಹೇಳಬಲ್ಲಿರಾ ?" ಎಂದನು.

ದ್ವೀಪದಿಂದ ಹೊರ ಬೀಳುವ ಮಾರ್ಗ ಯಾವು ದೆಂದು ಸೈನಿಕರಿಗಾದರೂ ಪ್ರತ್ಯೇಕವಾಗಿ ಏನೂ ಗೊತ್ತಿಲ್ಲ. ತಾವು ಸಮುದ್ರದ ತೀರದಲ್ಲಿ ಬಿಟ್ಟು ಬಂದ ಹಡಗುಗಳು ಯಾವ ಸ್ಥಿತಿಯಲ್ಲಿವೆ? ಅವು ಗಳೊಂದಿಗೆ ಇರುವವರ ಸ್ಥಿತಿ ಏನಾಗಿದೆ? ಯಾವುದೂ ತಿಳಿಯದು. ಅದರೆಡೆಯಲ್ಲಿ ಮಹಾದ್ರೋಹಿಯಾಗಿ ಇಲ್ಲಿಗೆ ಬಂದಿರುವ ಕುಂಭಾಂಡನಿಂದ ಕೇಡುಬಾರ ದಂತೆ ನೋಡಿಕೊಳ್ಳಬೇಕು. ತಮಗಿಂತಲೂ ಬಲ ವಾಗಿ ಅವನಿಗೆ ಈ ದ್ವೀಪವಾಸಿಗಳ ಸಹಕಾರ ಬೇರೆ ಲಭಿಸಿದೆ. ರಾಜ ಕುಲದೇವತೆಯಾದ ಕುಂಡಲಿನೀದೇವಿಯ ದಯೆ ಹೇಗಿದೆಯೋ! ಎಲ್ಲವೂ ಉತ್ತರವಿಲ್ಲದ ಪ್ರಶ್ನೆಗಳೇ.

"ದೊರೆಗಳೇ! ನಾವು ಇಲ್ಲಿಂದ ತಪ್ಪಿಸಿಕೊಂಡು ಹೋಗಲು, ಚತುರ್ನೇತ್ರ ಮಾಂತ್ರಿಕನು ಸಹಾಯ ಮಾಡಿದರೆ ಮಾಡಬೇಕು. ಅವನನ್ನು ಸ್ಪಷ್ಟವಾಗಿ ಕೇಳಿ ನೋಡುವುದು ಒಳ್ಳೆಯದಲ್ಲವೆ?" ಎಂದು ಒಬ್ಬ ಸೈನಿಕನು ಮೆಲ್ಲನೆ ದನಿ ತೆಗೆದನು.

"ನಮ್ಮ ಮನಸ್ಸು ಚತುರ್ನೇತ್ರನಿಗೆ ಕೇಳದೆಯೇ ಗೊತ್ತಾಗಿದೆಯೆಂದು ನನಗೆ ಕಾಣುತ್ತದೆ" ಎಂದನು ಸಮರ ಸೇನ. ತಮ್ಮನ್ನೆಲ್ಲ ಈ ಭಯಂಕರ ದ್ವೀಪದಿಂದ ಕುಂಡಲಿನೀ ದ್ವಿಪಕ್ಕೆ ಸೇರಿಸಿ ಬಿಡಯ್ಯಾ ಎಂದು ದೀನತೆಯಿಂದ ಚತುರ್ನೇತ್ರನನ್ನು ಪ್ರಾರ್ಥಿಸುವುದು ಹೇಡಿಯ ಲಕ್ಷಣವೇ ಹೊರತು ವಿವೇಕವೆನಿಸಲಾರದು. ಅಲ್ಲದೆ ಚತುರ್ನೇತ್ರನಿಗಾದರೂ ಅದು ಸಾಧ್ಯವೇ ಎಂಬ ಅನುಮಾನವು ಸಮರಸೇನನಿಗಿತ್ತು.

ಅವರು ಹೀಗೆ ಆಲೋಚನೆಯ ಗುಂಗಿನಲ್ಲಿದ್ದಾಗ ರಿವ್ವನೆ ಬಂದ ಬಾಣವೊಂದು ಸಮರಸೇನನ ತಲೆಗೆ ಒಂದಡಿ ಎತ್ತರದಲ್ಲಿ ಸಾಗಿ, ಮರದಕಾಂಡಕ್ಕೆ ಚುಚ್ಚಿಕೊಂಡಿತು. ಮರುಕ್ಷಣವೇ ಸಮರಸೇನನು ಹಾರಿ ನಿಂತು, "ಎಲ್ಲರೂ ಮರದ ಹಿಂದೆ ತಪ್ಪಿಸಿಕೊಳ್ಳಿರಿ! ಇದು ದ್ರೋಹಿ ಕುಂಭಾಡನೇ! ಅವನು ಇಲ್ಲೆಲ್ಲೋ ಹೊಂಚಿಕೊಂಡಿದ್ದು, ನಮ್ಮನ್ನು ಹತ ಮಾಡಲು ನೋಡುತ್ತಿದ್ದಾನೆ!" ಎನ್ನುತ್ತ ಸಮೀಪದಲ್ಲಿದ್ದ ಮರಗಳ ಗುಂಪಿನ ಕಡೆಗೆ ಓಡಿದನು.

ಸೈನಿಕರು ಕೂಡಾ ತಮ್ಮ ನಾಯಕನನ್ನು ಅನುಸರಿಸಿ ಓಡಿದರು. ಆಗ ಹಿಂದಿನಿಂದ, "ಆಗೋ! ಓಡುತ್ತಿದ್ದಾರೆ! ಹಿಡಿಯಿರಿ! ಜೀವದಿಂದ ಬಿಡ ಬೇಡಿ! ಹೊಡೆದು ಹಾಕಿರಿ!" ಎಂದು ಕುಂಭಾಂಡನ ಬೊಬ್ಬೆ ಕೇಳಿಸಿತು.

ಆದರ ಬೆನ್ನಿಗೆ ನಿಃಶಬ್ದವಾಗಿದ್ದ ಆ ಪ್ರದೇಶವೆಲ್ಲ ಕರ್ಕಶ ಶಬ್ದಗಳಿಂದ ತುಂಬಿತು. ಈಟಿಗಳನ್ನು ಹಿಡಿದು ಅಡಗಿಕೊಂಡಿದ್ದ ಆಟವಿಕರು ಮರಗಳ ಮರೆಯಿಂದಲೂ ಬಂಡೆಕಲ್ಲುಗಳ ಮರೆಯಿಂದಲೂ ಹೊರಬಿದ್ದು ಓಡಿಸಿಕೊಂಡು ಬರತೊಡಗಿದರು. ಸಮರಸೇನನಿಗೆ ಬಹಳ ದೊಡ್ಡ ಪ್ರಾಣಾಪಾಯ






ದಲ್ಲಿ ಸಿಕ್ಕಿಬಿದ್ದಿರುವಂತೆ ತೋರಿತು. ತಾನು ಕೇವಲ ಐದು ಮಂದಿ ಸೈನಿಕರೊಂದಿಗೆ, ಎಲ್ಲಾ ಕಡೆಯಿಂದ ಮುತ್ತಿಕೊಂಡು ಬರುವ ಕ್ರೂರರಾದ ಆಟವಿಕರನ್ನು ತಡೆಯಲು ಸಾಧ್ಯವಿಲ್ಲವೆಂಬುದು ಕಟುಸತ್ಯ. ಕ್ರೂರನಾದ ಕುಂಭಾಂಡನು ಆಟವಿಕರನ್ನು ಹುರಿದುಂಬಿಸುತ್ತ ಬೆಂಬತ್ತಿಕೊಂಡೇ ಇದ್ದಾನೆ! ಅವನು ದೂರ ಹೋದನೆಂದು ತಾನು ಭಾವಿಸಿದ್ದು ಎಂತಹ ತಪ್ಪಾಗಿ ಹೋಯಿತು!

ಸಮರಸೇನಾದಿಗಳು ಓಡುತ್ತಾ, ಗುಂಪಾಗಿ ಬೆಳೆದ ಮರಗಳ ಅಡಿಯ ಕತ್ತಲೆಯಲ್ಲಿ ಅಡಗುತ್ತ, ಮತ್ತೆ ಅಲ್ಲಿಂದ ಓಡುತ್ತಾ ಸ್ವಲ್ಪ ದೂರದವರೆಗೆ ಹೋದರು. ಅಷ್ಟು ಹೊತ್ತಿಗೆ ಕರಿಮೋಡದಿಂದಾಗಿ ಚಂದ್ರ ಪ್ರಕಾಶವು ತಗ್ಗಿ ಕ್ರಮವಾಗಿ ಕತ್ತಲೆ ಆವರಿಸಿಕೊಂಡು ಬಂದುದರಿಂದ, ಸಮರಸೇನನಿಗೆ ಕುಂಭಾಂಡನ ಕಡೆಯ ಆಟವಿಕರ ಕಣ್ಣಿಗೆ ಬೀಳದಂತೆ ತಪ್ಪಿಸಿಕೊಳ್ಳಲು ಅನುಕೂಲವಾಯಿತು.

ಕಡೆಗೆ ಎಲ್ಲರೂ ಒಂದಾನೊಂದು ಗುಡ್ಡದ ಗುಹೆಗಳ ಹತ್ತಿರ ಸೇರಿದರು. ಕುಂಭಾಂಡನೂ ಆಟವಿಕರೂ ಇನ್ನೂ ತಮ್ಮ ಶೋಧನೆಯಲ್ಲಿರುವರೆಂದು ಅವರ ಕೂಗುಗಳಿಂದ ತಿಳಿದು ಬರುತ್ತಿತ್ತು. ತಾವು ಇನ್ನೂ ಎಲ್ಲೆಲ್ಲೋ ಓಡುವುದಕ್ಕಿಂತಲೂ, ಸಮೀಪದಲ್ಲಿರುವ ಯಾವುದಾದರೂ ಗುಹೆಯೊಳಗೆ ಪ್ರವೇಶಿಸಿ, ರಾತ್ರಿಯನ್ನು ಅಲ್ಲಿ ಕಳೆಯುವುದು ಒಳ್ಳೆಯದೆಂದು ಸಮರಸೇನನಿಗೆ ತೋರಿತು.

ಅವನು ಒಂದು ಗುಹೆಯ ಮುಂದೆ ನಿಂತು ಅದರೊಳಗೆ ಪರೀಕ್ಷಿಸಿ ನೋಡ ತೊಡಗಿದನು. ಸೈನಿಕರು ತಮ್ಮ ನಾಯಕನ ಆಲೋಚನೆಯನ್ನು ತಿಳಿದು ಗುಹೆಯೊಳಗೆ ನುಸುಳಲು ಮುಂದಡಿ ಇಡುವಾಗ, ಸಮರಸೇನನು ಅವರನ್ನು ತಡೆದು "ಅವಸರಪಡಬೇಡಿ. ನಿಲ್ಲಿ!" ಎಂದು ಎಚ್ಚರಿಸಿದನು.

"ಯೋಚನೆ ಗೀಚನೆ ಏನಿಲ್ಲದೆ ಒಮ್ಮೆಗೇ ಇಂಥ ಗುಹೆಯೊಳಗೆ ಹೊಕ್ಕುಬಿಡುವುದು ಒಳ್ಳೆಯದಲ್ಲ. ಸಿಂಹದಂಥ ಕ್ರೂರ ಮೃಗವಾವುದಾದರೂ ಇರಲಿಕ್ಕೂ ಸಾಕು. ಪರೀಕ್ಷಿಸಿ ನೋಡದೆ ನುಸುಳಬಾರದು" ಎಂದನು ಸಮರಸೇನ.

"ಈಗ ಏನೋ ಒಂದು ಬೇಗನೇ ನಿರ್ಣಯಿಸಬೇಕಲ್ಲ ದೊರೆಗಳೇ! ಕಾಡು ಜನರು ನಮ್ಮನ್ನು ಹುಡುಕಿಕೊಂಡೇ ಇದ್ದಾರೆ!" ಎಂದು ಒಬ್ಬ ಸೈನಿಕನು ಹಿಂದಿರುಗಿ ನೋಡುತ್ತಾ ಹೇಳಿದನು.

"ಗುಹೆಯೊಳಗೆ ಮೃಗವೇನಾದರೂ ಇದೆಯೋ ಇಲ್ಲವೋ ಎಂಬುದನ್ನು ತಿಳಿಯುವುದಾದರೂ ಹೇಗೆ? ಇನ್ನೊಂದು ಗುಹೆಯ ಬಳಿಗೆ ಹೋದರೂ ಇದೇ ಸಮಸ್ಯೆ ತಾನೇ! ಕಲ್ಲು ಬಿಸುಡೋಣವೆ?" ಎಂದ ಇನ್ನೊಬ್ಬ ಸೈನಿಕ.

ಸೈನಿಕರ ಮಾತು ಕೇಳಿ ಸಮರಸೇನನು ಮುಗುಳು ನಗು ಸೂಸಿದನು. ತಾನು ಮುಂದಾಗಿ ಎಚ್ಚರಿಕೆ ಕೊಡದಿದ್ದರೆ ಇವರು ಹಿಂದು ಮುಂದು ನೋಡದೆ

ಗುಹೆಯೊಳಗೆ ಹೊಕ್ಕು ಬಿಡುತ್ತಿದ್ದರು. ಒಂದು ವೇಳೆ ಒಳಗಿರುವ ಸಿಂಹದಂಥ ಯಾವುದೋ ಮೃಗದ ಹೊಟ್ಟೆಗೆ ಸೇರುತ್ತಿದ್ದರು.

ಸಮರಸೇನನು ಬಿಲ್ಲಿಗೆ ಬಾಣ ಹೂಡಿ, "ನೀವು ಕತ್ತಿಗಳೊಂದಿಗೆ ಸಿದ್ಧವಾಗಿರಿ. ನಾನು ಗುಹೆಯೊಳಗೆ ಬಾಣ ಬಿಡುತ್ತೇನೆ. ಒಂದು ವೇಳೆ ಒಳಗೆ ಯಾವುದಾದರೂ ಕ್ರೂರಮೃಗವಿದ್ದರೆ ಹಠಾತ್ತಾಗಿ ಕೆರಳಿಕೊಂಡು ಬರುತ್ತದೆ ! ಜಾಗ್ರತೆ !" ಎಂದನು.

ಸೈನಿಕರು ಕತ್ತಿಯೊಂದಿಗೆ ತಯಾರಾಗಿ ನಿಂತರು. ಸಮರಸೇನನು ಒಂದು ಬಾಣವನ್ನು ಗುಹೆಯೊಳಗೆ ಪ್ರಯೋಗಿಸಿದನು. ಮರುಕ್ಷಣದಲ್ಲಿ ಅವನು ಊಹಿಸಿದ್ದು ನಿಜವಾಯಿತು. ಭಯಂಕರವಾಗಿ ಗರ್ಜಿಸುತ್ತ ಒಂದು ಸಿಂಹವು ಹೊರಕ್ಕೆಹಾರಿತು. ಆ ಕೂಡಲೇ ಸಿದ್ಧರಾಗಿದ್ದ ಸೈನಿಕರು ಅದರ ಮೇಲೆ ಕತ್ತಿಗಳನ್ನು ಬೀಸಿದರು. ನಾಲ್ಕಾರು ಕತ್ತಿಯ ಪೆಟ್ಟುಗಳನ್ನು ತಿಂದ ಆ ಸಿಂಹವು ಹೆದರಿ ಜೋರಿನಿಂದ ಗರ್ಜಿಸುತ್ತ ಕಾಡಿನಕಡೆಗೆ ಓಡಿ ಹೋಯಿತು.

ಸಮರಸೇನನು ಒಬ್ಬ ಸೈನಿಕನ ಕೈಯಿಂದ ಕತ್ತಿಯನ್ನು ತೆಗೆದುಕೊಂಡು ಗುಹೆಯೊಳಗೆ ಅಡಿ ತೆಗೆದಿಟ್ಟನು. ಉಳಿದ ಸೈನಿಕರು ಅವನನ್ನು ಅನುಸರಿಸಿದರು. ಗುಹೆಯೊಳಗೆ ಅದೊಂದೇ ಸಿಂಹವಿದ್ದಿತೆಂದು ಅವರು ನಂಬಿದರು. ಇನ್ನೂ ಇರುತ್ತಿದ್ದರೆ ಆಗಲೇ ಹೊರಗೆ ಬರಬೇಕಿತ್ತು. ಈ ಧೈರ್ಯದಿಂದ ಅವರು ಗುಹೆಯೊಳಗೆ ಹೊಕ್ಕಾಗ ಒಳಗಿನಿಂದ ಯಾವುದೋ ಕೂಗುತ್ತಿರುವಂತೆ ಶಬ್ದ ಕೇಳಿತು.

ಸಮರಸೇನನು ಒಂದಡಿ ಹಿಂದಕ್ಕಿಟ್ಟು, "ಗುಹೆಯೊಳಗೆ ಗಾಯಪಟ್ಟ ಇನ್ನೊಂದು ಸಿಂಹವಿರುವ ಹಾಗಿದೆ. ಅದು ಯಾವಸ್ಥಿತಿಯಲ್ಲಿರುವುದೋ ತಿಳಿಯದೆ ಒಳಗೆ ಹೋಗ ಕೂಡದು. ಬೇಗ ತರಗೆಲೆ ಪುರುಳೆಗಳನ್ನು ಸೇರಿಸಿ ಬೆಂಕಿಹಚ್ಚಿರಿ ನೋಡುವಾ" ಎಂದನು ಸೈನಿಕರಿಗೆ.



ಕೂಡಲೇ ಇಬ್ಬರು ಸೈನಿಕರು ಚಕಮುಕಿ ಕಲ್ಲು ಹೊಡೆದು ಗುಹೆಯಬಾಗಿಲು ಹತ್ತಿರ ಬೆಂಕಿ ಉರಿಸಿದರು. ಆದರಿಂದ ಬಟ್ಟೆದೊಂದಿಯ ಚಿಕ್ಕ ದೀವಟಿಗೆಯನ್ನು ಬೆಳಗಿಸಿ ಸಮರಸೇನನು ಮುಂದೆ ಹೋಗಿ ಗುಹೆಯ ಒಳ ಭಾಗವನ್ನು ಪರೀಕ್ಷಿಸಿ ನೋಡಿದನು. ಅಲ್ಲಿ ಬಾಣದ ಪೆಟ್ಟಿನಿಂದ ಸೋಂಕಾಡಿಕೊಂಡಿದ್ದ ಒಂದು ಸಿಂಹದ ಮರಿಯೂ, ಅದರ ಪಕ್ಕದಲ್ಲಿ ಹೆದರಿಕೆಯಿಂದ ಗುರುಗುಡುತ್ತಿದ್ದ ಇನ್ನೊಂದು ಸಿಂಹದ ಮರಿಯೂ ಇದ್ದುವು.

"ಸಣ್ಣ ಮರಿಗಳು. ಭಯವೇನಿಲ್ಲ. ಒಳಗೆ ಬನ್ನಿ" ಎಂದು ಸಮರಸೇನನು ಗುಹೆಯೊಳಗೆ ಹೋದನು.

ಸಿಂಹದ ಮರಿಗಳಲ್ಲಿ ಗಾಯವಾಗದಿದ್ದ ಸಿಂಹದ ಮರಿ ಮೆಲ್ಲನೆ ಗುರುಗುಡುತ್ತ, ಗುಹೆಯ ಹಿಂದಿನ ಭಾಗಕ್ಕೆ ಹೋಗ ತೊಡಗಿತು. ಸಮರಸೇನನು ಸಣ್ಣದನಿಯಿಂದ ಸಿಳ್ಳುಹಾಕುತ್ತ, ಗುಹೆಯ ಒಂದು ಮೂಲೆಯಲ್ಲಿ ಕುಳಿತನು. ಸೈನಿಕರು ಕೂಡಾ ಗುಹೆ




ಯೊಳಗೆ ಬಂದು. ಸುತ್ತಲೂ ನೋಡುತ್ತ ನಿಂತರು. ಅದುವರೆಗೆ ಬಹಳ ಹೊತ್ತಾಗಿದ್ದರೂ, ಕುಂಭಾಂಡನೂ ಅವನ ಕಡೆಯ ಆಟವಿಕರೂ ಇನ್ನೂ ಸಮರಸೇನನನ್ನು ಹುಡುಕಿಕೊಂಡಿದ್ದಾರೆಂದು ಆಗಾಗ ಕೇಳಿ ಬರುವ ಅವರ ಶಬ್ದಗಳಿಂದ ಗೊತ್ತಾಗುತ್ತಿತ್ತು. ಒಂದೆರಡುಬಾರಿ ಕತ್ತಲೆಯಲ್ಲಿ ಅವರು ಗುರುತು ತಿಳಿಯದೆ ತಮ್ಮವರನ್ನೇ ಹಿಡಿದು "ಸಿಕ್ಕಿದರೂ !" ಎಂದು ಕೂಗಿದ್ದೂ, "ನಾವಲ್ಲಪ್ಪೋ" ಎಂಬ ಮರುಕೂಗುಹಾಕಿದ್ದೂ ಕೇಳಿಸಿತು. "ಹೆಚ್ಚು ಕೂಗಬೇಡ್ರೋ !" ಎಂದು ಕುಂಭಾಂಡನೂ ಒಂದೆರಡು ಬಾರಿ ಎಚ್ಚರಿಸಿದನು.

ತಾವು ಅಡಗಿದ ಸ್ಥಳವು ಗೊತ್ತಾಗದಂತೆ ಸಮರಸೇನನು ಗುಹೆಯ ಮುಂದೆ ಹಾಕಿದ ಉರಿಯನ್ನು ಪೂರ್ತಿ ಆರಿಸಿ ಕತ್ತಲೆ ಮಾಡಿಸಿದನು.

ಈಗ ಗುಹೆಯೊಳಗೆ ಗುಮ್ಮಗತ್ತಲೆ. ಬಾಣದ ಏಟು ತಿಂದ ಸಿಂಹದಮರಿ ಸತ್ತು ಹೋದುದರಿಂದ ಯಾವ ಸದ್ದೂ ಕೇಳಲಿಲ್ಲ. ಗುಹೆಯ ಹಿಂದೆ ಹೋದ ಸಿಂಹದ ಮರಿಮಾತ್ರ ಎಲ್ಲೋ ಮೂಲೆಯಲ್ಲಿರುವಂತೆ ಒಮ್ಮೊಮ್ಮೆ ಆ ಕಡೆಯಿಂದ ಸಣ್ಣ ಗರ್ಜನೆ ಕೇಳುತ್ತಿತ್ತು. ಹೊರಗೆ ಓಡಿ ಹೋದ ಸಿಂಹವು, ತನ್ನ ಮರಿಗಳ ಮಮಕಾರದಿಂದ ಹಿಂದಿರುಗಿ ಬರಬಹುದೆಂಬ ಭಯವು ಸಮರಸಿಂಹನಿಗಾಯಿತು. ಹೊರಗೆಲ್ಲಿಯೂ ಜನರ ಶಬ್ದ ಕೇಳದಿದ್ದರೂ, ಕುಂಭಾಂಡನೂ ಆಟವಿಕರೂ ನಿಶ್ಶಬ್ದತೆಯಿಂದ ತಮ್ಮನ್ನು ಹುಡುಕುತ್ತಿರಬೇಕೆಂದು ಇನ್ನಿಷ್ಟು ಭಯವೂ ಅನುಮಾನವೂ ಅವನ ನೆಮ್ಮದಿಯನ್ನು ಕೆಡಿಸಿತು.

ಈ ಕಾರಣಗಳಿಂದ ಸಮರಸೇನನು ಮಾತ್ರವಲ್ಲ. ಸೈನಿಕರೂ ಹೆದರಿಕೊಂಡು ಜೀವವನ್ನು ಕೈಯಲ್ಲಿಟ್ಟುಕೊಂಡಿದ್ದರು. ಒತ್ತೊತ್ತಿ ಬರುವ ನಿದ್ದೆಯನ್ನು ಬಲವಂತದಿಂದ ಹಿಂದೊತ್ತಿಕೊಂಡು ಕತ್ತಲೆಯಲ್ಲಿ ಕುಳಿತಿದ್ದರು. ಹಠಾತ್ತಾಗಿ ಸಮರಸೇನನಲ್ಲಿ ಇನ್ನೊಂದು ತೀವ್ರವಾದ ಭಯದ ಒತ್ತಡವೆದ್ದಿತು. ಒಂದು ವೇಳೆ ಕುಂಭಾಂಡನಿಗೆ ತಾವಿರುವ ಗುಹೆಗೊತ್ತಾಯಿತೇನೋ? ಅವನು ತನ್ನ ಆಟವಿಕರ ಗುಂಪಿನೊಂದಿಗೆ ಬಂದು ಗುಹೆಯ ಬಾಯಿಯಲ್ಲಿ ಹೊಕ್ಕುಬಿಟ್ಟರೆ ಹೋರಾಡಲಿಕ್ಕೂ ಸಾಧ್ಯವಿಲ್ಲದೆ ಪ್ರಾಣಬಿಡಬೇಕಾಗಿ ಬರುತ್ತದೆ ! ಹಾಗಾಗಬಾರದು !

ಅವನು ಸೈನಿಕರನ್ನು ನೋಡಿ, "ನಾವು ಈ ಗುಹೆಯೊಳಗೆ ಕುಳಿತಿರುವುದರಿಂದ ಥಕ್ಕನೆ ಕುಂಭಾಂಡನು ಬಂದುಬಿಟ್ಟರೆ ಇಕ್ಕಟ್ಟಿನಲ್ಲಿ ಸಿಕ್ಕಿಕೊಳ್ಳುತ್ತೇವೆ. ಆದ್ದರಿಂದ ನೀವು ಆ ಮರದ ಮೇಲೇರಿ ಆಟವಿಕರು ನಮ್ಮನ್ನು ಶೋಧಿಸಿಕೊಂಡು ಈ ಪ್ರಾಂತದಲ್ಲೆಲ್ಲಿಯಾದರೂ ಇರುವರೋ ನೋಡಿರಿ. ಒಂದುವೇಳೆ ಅವರು ಈ ಕಡೆಗೆ ಬರುವ ಸುಳಿವು ಕಂಡರೆ, ಒಬ್ಬನು ಇಳಿದು ಬಂದು ನನಗೆ ಹೇಳಲಿ. ನಾವು ಇಲ್ಲಿಂದ ಬೇರೊಂದು ಕಡೆಗೆ ತಪ್ಪಿಸಿಕೊಳ್ಳೋಣ." ಎಂದನು.

ಸೈನಿಕರು ತಮ್ಮ ನಾಯಕನ ಅಪ್ಪಣೆಯಂತೆ ಗುಹೆಯಿಂದ ಹೊರಗೆ ಬಂದು ಕೊಂಬೆಗಳಿಂದಲೂ, ಎಲೆಗಳಿಂದಲೂ ತುಂಬಿದ ಮರದ ಮೇಲೇರಿ, ನಾಲ್ಕುಸುತ್ತಲೂ ಪರೀಕ್ಷಿಸಿ ನೋಡ ತೊಡಗಿದರು. ಅಲ್ಲಲ್ಲಿ ಮುದ್ದೆಮುದ್ದೆಯಾಗಿ ಚಂದ್ರ ಪ್ರಕಾಶವೂ, ಕತ್ತಲೆಯೂ ಕಾಣಿಸುತ್ತಿತ್ತೇ ಹೊರತು ಜನರ ನಡೆ ದಾಟಗಳೊಂದೂ ಅವರಿಗೆ ಕಾಣಲಿಲ್ಲ. ರಾತ್ರಿಯ ಹೊತ್ತಿನಲ್ಲಿ ಕಾಡಿನಲ್ಲಿ ಹಾಗೆ ಪರೀಕ್ಷಿಸಿ ತಿಳಿಯುವುದೂ ಕಷ್ಟವೇ.

ಗುಹೆಯೊಳಗೆ ಒಬ್ಬಂಟಿಗನಾಗಿದ್ದ ಸಮರಸೇನನಿಗೆ ಸಮೀಪದಲ್ಲೆಲ್ಲೋ ಮನುಷ್ಯರ ಮಾತುಗಳು ಕೇಳ ಬಂದುವು. ಅವು ತನ್ನ ಸೈನಿಕರ ಮಾತುಗಳಂತಿರಲಿಲ್ಲ. ಒಂದು ವೇಳೆ ಕುಂಭಾಂಡನ ಅನುಚರರು ಇಲ್ಲೆಲ್ಲೋ ಹೊಂಚಿಕೊಂಡಿರುವರೋ? ಸದ್ದಿಲ್ಲದಂತೆ ಗುಹೆಯ ದ್ವಾರದ ಹೊರಗೆ ಬಂದು ಸುತ್ತೂ ಕತ್ತು ತಿರುಗಿಸಿ ನೋಡಿದನು. ಯಾರೂ ಇರುವಂತೆ ಕಾಣಲಿಲ್ಲ. ಆ ಮಾತಿನ ಧ್ವನಿಯನ್ನು ಕಿವಿಗೊಟ್ಟು ಆಲಿಸಿದಾಗ ಅದು ಗುಹೆಯ ಒಳಗೇ ಹಿಂದಿನ ಭಾಗದಿಂದ ಬರುವಂತಿತ್ತು. ಹಾಗಾದರೆ ಗುಹೆಯೊಳಗೆಲ್ಲಿಯಾದರೂ ರಹಸ್ಯ ದ್ವಾರವಿರಬೇಕೆನಿಸಿತು. ಈ ಗುಡ್ಡದಲ್ಲಿರುವ ಸಿಂಹದ ಗುಹೆಯೊಳಗೆ ಮಾನವರು ಹೇಗೆ ಪ್ರವೇಶಿಸಿರಬಹುದು? ಅಥವಾ ಮನುಷ್ಯರು ತಮ್ಮ ಸೌಕರ್ಯಕ್ಕಾಗಿ ಏರ್ಪಡಿಸಿಕೊಂಡ ಗುಹೆಯಲ್ಲಿ ಸಿಂಹವು ಸೇರಿರಬಹುದೆ? ಯಾವುದಕ್ಕೂ ನೋಡೋಣವೆಂದುಕೊಂಡು ಸಮರಸೇನನು ಗುಹೆಯೊಳಗಿನ ಗೋಡೆಯನ್ನು ತಡವುತ್ತಾ ಹಿಂದಿನ ಭಾಗದವರೆಗೂ ಹೋದನು.

ಹಠಾತ್ತಾಗಿ ಅವನ ಕೈಗೆ ಚಿಕ್ಕದೊಂದು ಬೆಣೆಯಂತಹುದು ತಗಲಿತು. ಅದನ್ನು ಆಚೀಚೆ ಆಡಿಸಿ ಎಳೆದನು. ಆಗ ಕಲ್ಲಿನಲ್ಲಿ ಅಳವಡಿಸಲ್ಪಟ್ಟ ವಿಚಿತ್ರವಾದ ಕಲ್ಲಿನ ಬಾಗಿಲು ತೆರೆದುಕೊಂಡಿತು. ಅದರಿಂದ ಚಂದ್ರಪ್ರಕಾಶವು ಗುಹೆಯೊಳಗೆ ಪ್ರವೇಶಮಾಡಿತು! ಆಟವಿಕ ಜಾತಿಯವರು ಶತ್ರುಗಳಿಂದ ತಪ್ಪಿಸಿಕೊಳ್ಳಲು ಮಾಡಿಕೊಂಡ ಏರ್ಪಾಡಾಗಿರಬೇಕು ಇದು.

ಸಮರಸೇನನು ಆ ದ್ವಾರದಿಂದ ಹೊರಬಂದು ಸುತ್ತಲೂ ನೋಡಿದನು. ಕೆಲವು ಗಜಗಳ ದೂರದಲ್ಲಿ ಇಬ್ಬರು ಮನುಷ್ಯರು ತಮ್ಮೊಳಗೆ ಏನೋ ಮಾತಾಡಿಕೊಳ್ಳುತ್ತಿದ್ದರು. ದುಸ್ತುಗಳಿಂದ ಅವರು ಆಟವಿಕ ಜಾತಿಯವರಾಗಿ ಕಾಣಲಿಲ್ಲ.

ಸಮರಸೇನನು ಏನು ಮಾಡುವುದೆಂದು ಆಲೋಚಿಸುವುದರೊಳಗೆ, ಅವರು ಸಮರಸೇನನನ್ನು ನೋಡಿ, ಮಿಂಚಿನ ವೇಗದಲ್ಲಿ ಸಮರಸೇನನ ಮೇಲೆ ಹಾರಿ, ಅವನ ಕೈಗಳನ್ನು ಹಿಡಿದು ಬೆನ್ನಿನೊಂದಿಗೆ ಬಿಗಿದುಬಿಟ್ಟರು.

(ಇನ್ನೂ ಇದೆ)






## ೧೨

[ಕುಂಭಾಂಡನು ಆಟವಿಕರೊಂದಿಗೆ ತಮ್ಮನ್ನು ಹುಡುಕುವುದನ್ನು ತಿಳಿದು, ಸಮರಸೇನನು ತನ್ನ ಸೈನಿಕರೊಂದಿಗೆ ಗುಹೆಯೊಳಗೆ ಅಡಗಿಕೊಂಡನು. ಅದರಲ್ಲಿಯೂ ಅಪಾಯವನ್ನು ಶಂಕಿಸಿ ಸೈನಿಕರನ್ನು ಮರಗಳ ಮೇಲಿರುವಂತೆ ಕಳುಹಿಸಿದನು. ಗುಹೆಯ ಹಿಂದೆ ಏನೋ ಶಬ್ದ ಕೇಳಿ ಬರಲು, ಸಮರಸೇನನು ಪರಡುತ್ತಾ ಹೋಗಿ ಒಂದು ದ್ವಾರದ ಮೂಲಕ ಹೊರಬಿದ್ದನು. ಕೂಡಲೇ ಇಬ್ಬರು ಬಲಿಷ್ಠರು ಅವನನ್ನು ಹಿಡಿದುಕೊಂಡರು.]

ಸ್ವಲ್ಪವೂ ಇದಿರಂ ನೋಡದಂತೆ ಒಮ್ಮೆಗೇ ಇಬ್ಬರು ಮಹಾ ಬಲಿಷ್ಠರು ತನ್ನ ಮೇಲೆ ಬಿದ್ದು ಕೈಗಳನ್ನು ಹಿಂದಕ್ಕೆ ಬಿಗಿದುಕಟ್ಟಿದುದರಿಂದ ಸಮರಸೇನನು ತಬ್ಬಿಬ್ಬಾಗಿ ಹೋದನು. ಆತ್ಮರಕ್ಷಣೆಗೆ ಕೂಡಾ ಅವಕಾಶವಿಲ್ಲದೆ ಹೋಯಿತು. ಅವನ ಬಾಯಿಯಿಂದ ಯಾವ ಶಬ್ದವೂ ಹೊರಡಲಿಲ್ಲ. ಇನ್ನಷ್ಟು ಭೀತಿ ಹುಟ್ಟುವ ಹಾಗೆ ಗುಹೆಯ ಮುಂಗಡೆಯಿಂದ ಸಿಂಹದ ಗರ್ಜನೆ ಬೇರೆ ಕೇಳ ತೊಡಗಿತು. ತನ್ನ ಮರಿಗಳನ್ನು ನೆನೆದುಕೊಂಡು ತಾಯಿ ಸಿಂಹವೋ ತಂದೆ ಸಿಂಹವೋ ಬಂದಿರಬಹುದು, ಆ ಸಿಂಹ ಗರ್ಜನೆ ಸಮೀಪದಲ್ಲಿ ಕೇಳಿದ ಕೂಡಲೇ ಸಮರಸೇನನನ್ನು ಬಂಧಿಸಿದ ಬಂಟರು ಒಮ್ಮೆಗೇ ಅವನನ್ನು ಯಾವುದೋ ಮೂಟೆಯ ಹಾಗೆ ಹೆಗಲ ಮೇಲೆ ಹಾಕಿಕೊಂಡು ಅಲ್ಲಿಂದ ಓಡಲು ತೊಡಗಿದರು. ಒಬ್ಬನ ಮೇಲೆಯೇ ಸಮರಸೇನನ ಭಾರ ಬೀಳದಂತೆ ಇನ್ನೊಬ್ಬನೂ ಆಗಾಗ ಕೈಗೊಡುತ್ತಾ ಜತೆ ಬಿಡದೆ ಓಡುತ್ತಿದ್ದನು.

ಸಮರಸೇನನಿಂದ ಏನು ಮಾಡಲಿಕ್ಕೂ ಸಾಧ್ಯ ವಿರಲಿಲ್ಲ. ಉರುಳಾಡುವುದರಿಂದ ಇನ್ನಿಷ್ಟು ನೋವೇ ಹೊರತು ಪ್ರಯೋಜನವಿಲ್ಲವೆಂದುಕೊಂಡು, ಬಲ ಪ್ರದರ್ಶನಕ್ಕೆ ಹೋಗದೆ ಸುಮ್ಮನಿದ್ದನು. ಆದರೆ



ಬೆಳುದಿಂಗಳ ರಾತ್ರಿಯಾದುದರಿಂದ ಸುತ್ತಮುತ್ತಣ ಪ್ರಾಂತಗಳನ್ನು ಪರೀಕ್ಷಿಸಿ ನೋಡಿಕೊಂಡೇ ಇದ್ದನು. ಅವರು ಈಗ ಸಾಗುತ್ತಿರುವುದು ಒಂದು ಬೆಟ್ಟದ ಕಣಿವೆ ಪ್ರದೇಶ. ಅವನನ್ನು ಬಂಧಿಸಿ ಹೊತ್ತುಕೊಂಡವರಿಬ್ಬರೂ ಬೆಟ್ಟದ ಮೇಲಿನಿಂದ ಕೆಳ ಭಾಗಕ್ಕೆ ಇಳಿಯುತ್ತಾ ಓಡುತ್ತಿದ್ದರು. ದೂರದಲ್ಲೆಲ್ಲಿಯೋ ಮಿಣುಕು ಮಿಣುಕಾದ ದೀಪಗಳು ಆಗಾಗ ಕಾಣುತ್ತಿದ್ದುವು, ಆ ಕಡೆಗೇ ತಾನು ಹೋಗಲ್ಪಡುತ್ತಿದ್ದೇನೆಂದು ಸಮರಸೇನನಿಗೆ ತಿಳಿಯಿತು. ಅದು ಕುಂಭಾಂಡನ ಪ್ರದೇಶವಾಗಿರಬಹುದೇ? ಇವರು ಅವನ ಕಡೆಯುವರಾಗಿರಬಹುದೆ ?

"ಯಾರು ನೀವು ? ನನ್ನನ್ನು ಏಕೆ ಬಂಧಿಸಿ ಒಯ್ಯುವಿರಿ?" ಎಂದು ಸಮರಸೇನನು ಬಾಯಿ ಬಿಟ್ಟು ಕೇಳಿದನು.

ಅವನ ಬಾಯಿಯಿಂದ ಹೊರಟ ಪ್ರಶ್ನೆಯನ್ನು ಕೇಳಿ, ಅವನನ್ನು ಹೊತ್ತುಕೊಂಡು ಹೋಗುವವರು ಮುಖ ಮುಖ ನೋಡಿಕೊಂಡರೇ ಹೊರತು, ಏನೂ ಹೇಳದೆ ಮೌನವಾಗಿಯೇ ನಡೆಯುತ್ತಿದ್ದರು. ಸಮರಸೇನನು ಸ್ವಲ್ಪ ಹೊತ್ತು ಸುಮ್ಮನಿದ್ದು ಪುನಃ ಅದೇ ಪ್ರಶ್ನೆಯನ್ನು ಮಾಡಿದನು. ಅದರೊಂದಿಗೆ, "ನೀವು ಮಾತಾಡಿಕೊಂಡ ಭಾಷೆ ನನ್ನ ಕಿವಿಗೆ ಬಿದ್ದಿತ್ತು. ಆ ಭಾಷೆಯಲ್ಲಿಯೇ ಕೇಳಿದ್ದೇನೆ. ನನ್ನ ಮಾತು ನಿಮಗೆ ಅರ್ಥವಾಗದೆ ಇರಲಿಕ್ಕಿಲ್ಲ." ಎಂದನು.

ಇಷ್ಟು ಹೇಳಿದ ಮೇಲೆ ಇಬ್ಬರಲ್ಲಿ ಒಬ್ಬನು, "ನೀನು ಕೇಳಿದ ಪ್ರಶ್ನೆಗಳನ್ನು ನಮ್ಮ ನಾಯಕನನ್ನೇ ಕೇಳು. ಆತನೇ ಉತ್ತರ ಹೇಳುತ್ತಾನೆ" ಎಂದನು.

ಇನ್ನು ಇವರನ್ನು ಪ್ರಶ್ನಿಸಿ ಪ್ರಯೋಜನವಿಲ್ಲವೆಂದು ಸಮರಸೇನನಿಗೆ ತಿಳಿಯಿತು. ಸ್ವಲ್ಪ ಹೊತ್ತಿಗೆ ಅವರು ಸಮರಸೇನನನ್ನು ಹೊತ್ತುಕೊಂಡು ಒಂದು ಕಡೆಯಲ್ಲಿ ಕೆಳಗಿಳಿಸಿ, ಕೈಗಳಿಗೂ ಕಾಲುಗಳಿಗೂ ಕಟ್ಟಿದ ಕಟ್ಟುಗಳನ್ನು ಬಿಚ್ಚಿಬಿಟ್ಟರು, ತರುವಾಯ ಸಮರಸೇನನ ಕೈಗಳನ್ನು ಗಟ್ಟಿಯಾಗಿ ಹಿಡಿದು ಎಳೆಯುತ್ತಾ ಮುಂದೆ ನಡೆಯ ತೊಡಗಿದರು.

ಹೀಗೆ ಸ್ವಲ್ಪದೂರ ಹೋದಾಗ ದೀಪಗಳೆಲ್ಲ ಹತ್ತಿರವಾದುವು. ದಾರಿಯಲ್ಲಿ ಮರದ ಮೇಲೆ ಕುಳಿತಿದ್ದ ಕಾವಲಿಗನೊಬ್ಬನು. "ನಮ್ಮವರಿಬ್ಬರು ಯಾವನನ್ನೋ ಬಂಧಿಸಿ ತರುತ್ತಿದ್ದಾರೆ. ದಾರಿ ಬಿಡೋಣ್ರಿಯಪ್" ಎಂದು ಕೊರಳೆತ್ತಿ ಕೂಗಿ ಹೇಳಿದನು. ಆ ಕೂಗಿಗೆ ಉತ್ತರವೋ ಎಂಬಂತೆ ಮತ್ತೆ ಕೆಲವು ಕೂಗುಗಳು ಕೇಳಿಬಂದುವು. ಈ ಬಗೆಯ ಕ್ರಮವನ್ನು ನೋಡಿ ಸಮರಸೇನನಿಗೆ ಆಶ್ಚರ್ಯದೊಂದಿಗೆ ಭಯವೂ ಬೆರೆಯಿತು, ತನ್ನ ಸಹಾಯಕರಾದ ಸೈನಿಕರಿಗೂ ತನ್ನ ಗತಿ ತಿಳಿಯದೆ ಹೋಯಿತಲ್ಲಾ ಎಂದು ಮಿಡುಕಿಕೊಂಡನು. ಇವರಾಗಿಯೇ ತನ್ನ ಬಂಧನವನ್ನು ಬಿಡಿಸಿದುದನ್ನು ನೋಡಿದರೆ, ತಾನು ತಪ್ಪಿಸಿಕೊಳ್ಳಲು ನೋಡುವುದು ಬುದ್ಧಿಗೇಡಿತನವಾದೀತೆಂದೇ ತೋರಿತು.

ಸ್ವಲ್ಪ ಹೊತ್ತಿಗೆ ಅವರಿಬ್ಬರೂ ಸಮರಸೇನನನ್ನು ಒಂದು ಮನೆಯ ಮುಂದೆ ನಿಲ್ಲಿಸಿ ಬಾಗಿಲು ತಟ್ಟಿದರು. ಕೂಡಲೇ ಒಬ್ಬನು ಬಾಗಿಲು ತೆರೆದು ಸಮರಸೇನನನ್ನು ಒಳಗೆ ಕರೆದುಕೊಂಡು ಹೋಗಿ, ಮತ್ತೆ ಕಾಲುಗಳನ್ನೂ ಕೈಗಳನ್ನೂ ಹಗ್ಗದಿಂದ ಕಟ್ಟಿ, "ಈ ರಾತ್ರಿ ಇದೇ ನಿನ್ನ ಮಲಗುವ ಕೋಣೆ. ಬೆಳಗಾದ ಮೇಲೆ ನಿನ್ನ ಪಾಲಿಗೆ ಭಾರೀ ಮೊಸಳೆ ಹಬ್ಬ ಬರಲಿದೆ," ಎಂದು ಹೇಳಿ ಬಾಗಿಲು ಮುಚ್ಚಿ ಮೂವರೂ ಹೊರಟು ಹೋದರು.

ಮಹಾವೀರನಾದ ಸಮರಸೇನನು ಮಹಾ ಯಾತನೆಯನ್ನು ಅನುಭವಿಸುತ್ತ ಆ ರಾತ್ರಿಯನ್ನು ಆ ಕತ್ತಲೆ ಕೋಣೆಯಲ್ಲಿ ಕಳೆದನು. ಚಿಂತೆಯಿಂದ ನಿದ್ದೆಯೇ ಬರಲಿಲ್ಲ. ಬೆಳಗಾಗುವ ಸೂಚನೆಯಂತೆ ಕೋಳಿಗಳ ಕೂಗು ಕೇಳಿಬಂದಿತು. ಆ ಮೇಲೆ ಗುಡಿಯ ಗಂಟೆಯಂತೆ ಘಂಟಾನಾದವು ಕೇಳಿಸಿತು, ನೋಡ ನೋಡುತ್ತಿರಲು ಹೊರಗಿನಿಂದ ಅಡಿಗಳ ಸಪ್ಪಳವು ಕೇಳಿಬಂದಿತು. ಕಿರ್ರೆಂದು ಕೋಣೆಯ ಬಾಗಿಲು ತೆರೆದುಕೊಂಡಿತು. ಸಮರಸೇನನು ತಲೆಯೆತ್ತಿ ನೋಡಿದನು. ಬಿಚ್ಚು ಗತ್ತಿಯನ್ನು ಧರಿಸಿದ್ದ ಇಬ್ಬರು ಹೊಸ ಕಟ್ಟಾಳುಗಳು, ತೀಕ್ಷ್ಣ ದೃಷ್ಟಿಯಿಂದ ನೋಡುತ್ತ ಸಮರಸೇನನ ಬಳಿಗೆ ಬಂದು ತಮ್ಮೊಳಗೆ ಏನೋ ಸನ್ನೆಮಾಡಿಕೊಂಡರು. ಆಗ ಸಮರಸೇನನು, "ಆ ಗಂಟೆಯ ಶಬ್ದ ಯಾವ ದೇವರ ಗುಡಿಯದು?" ಎಂದು ಕೇಳಿದನು.

ಅದನ್ನು ಕೇಳಿ ಒಬ್ಬನು ನಗುತ್ತ, "ಅದು ಗುಡಿಯ ಗಂಟೆಯಲ್ಲ; ನಿನ್ನ ಸಾವಿನ ಸೂಚನೆಯ ಗಂಟೆ! ನಮ್ಮ ನಾಯಕ ವ್ಯಾಘ್ರದತ್ತನು ಕೇಳುವ ಪ್ರಶ್ನೆಗಳಿಗೆ ಸರಿಯಾದ ಉತ್ತರ ಕೊಡು. ಇಲ್ಲದೇ ಹೋದರೆ ನಿನ್ನ ನೂರು ವರ್ಷ ಇವತ್ತಿಗೇ ಪೂರ್ತಿಯಾಗುತ್ತದೆ! ಜಾಗ್ರತೆ!" ಎಂದನು.

"ನಾಯಕ ವ್ಯಾಘ್ರದತ್ತ! ಯಾರವನು? ಕುಂಭಾಂಡನ ಸಂಬಂಧದವನಂತೆ ಕಾಣುವುದಿಲ್ಲ. ಅವನಿಗೆ ತನ್ನಿಂದ ತಿಳಿಯ ತಕ್ಕ ರಹಸ್ಯವೇನಿರಬಹುದು? ಇಂತಹ ಪ್ರಶ್ನೆಗಳಿಗೆ ಉತ್ತರ





ತಿಳಿಯಲು ಸಮರಸೇನನಿಗೆ ಸಾಧ್ಯವಾಗಲಿಲ್ಲ. ತುಂಬ ಕ್ರೂರರಂತೆ ಕಾಣುವ ವ್ಯಾಘ್ರದತ್ತನ ಅನುಚರರನ್ನು ನೋಡಿದರೆ ಇವರಿಂದ ಯಾವ ಸುದ್ದಿಯೂ ಗೊತ್ತಾಗುವುದಿಲ್ಲವೆಂದೇ ಕಾಣುತ್ತದೆ. ಅನಾಗರಿಕವಾದ ಈ ಅರಣ್ಯ ದ್ವೀಪದಲ್ಲಿ ವ್ಯಾಘ್ರದತ್ತನ ಅಧಿಕಾರ ಪ್ರದೇಶವು ಒಂದು ಕ್ರಮದಲ್ಲಿ ನಡೆಯುವ ಹಾಗಿದೆ. ಧೂಮಕೇತುವಿನ ದುಃಶಕುನವನ್ನು ಧಿಕ್ಕರಿಸಿ ಹೊರಟ ತನ್ನನ್ನು ಕುಂಡಲಿನೀದೇವಿಯೇ ಕಾಪಾಡ ಬೇಕು! ಹೀಗಂದುಕೊಂಡು ಸಮರಸೇನನು ಕಣ್ಣು ಮುಚ್ಚಿ ಧ್ಯಾನಿಸಿಕೊಂಡನು.

ಬಂದವರು ಮೌನವಾಗಿಯೇ ಸಮರಸೇನನ ಕೈ ಕಾಲುಗಳ ಕಟ್ಟುಗಳನ್ನು ಬಿಚ್ಚಿ ಆ ಕೋಣೆಯಿಂದ ಹೊರಗೆ ಕರೆದುಕೊಂಡು ನಡೆದರು. "ಎಲ್ಲಿಗೆ ತೆಗೆದುಕೊಂಡು ಹೋಗುವಿರೆಂಬುದನ್ನಾದರೂ ಹೇಳುವಿರಾ?" ಎಂದು ಕೇಳಿದನು ಸಮರಸೇನ. "ಯಮಧರ್ಮ ರಾಜನ ಬಳಿಗೆ! ಅರ್ಥ ವಾಗಿಲ್ಲವೇ? ವ್ಯಾಘ್ರದತ್ತನ ಬಳಿಗೆ! ಅಲ್ಲಿ ತಲೆ ಸರಿಯಾಗಿಟ್ಟುಕೊಂಡು ಪ್ರವರ್ತಿಸು. ತಪ್ಪಿದರೆ ತಲೆ ಹಾರಿಹೋದೀತು!" ಎಂದನು ಕಣ್ಣು ತಿರುಗಿಸುತ್ತ.

ಅವರು ಸ್ವಲ್ಪ ದೂರ ನಡೆದು ಒಂದು ಭವನ ವನ್ನು ಪ್ರವೇಶಿಸಿದರು. ಅಲ್ಲಿ ಬಗೆಬಗೆಯ ಆಯುಧ ಗಳನ್ನು ಧರಿಸಿದ ಅನೇಕಮಂದಿ ಸೈನಿಕರು, ಗಜಿ ಬಿಜಿಯಾಗಿ ಮಾತಾಡಿಕೊಂಡಿರುವುದು ಕೇಳಿಸಿತು. ಯಾರೂ ಬರುವವರನ್ನು ಲಕ್ಷ್ಯಮಾಡಿದಂತೆ ಕಾಣಲಿಲ್ಲ.

ಹಠಾತ್ತಾಗಿ ದೊಡ್ಡದೊಂದು ಬಾಗಿಲು ತೆರೆಯಲ್ಪಟ್ಟಿತು. ಇದಿರಿನಲ್ಲಿ ಎತ್ತರವಾದ ಪೀಠದ ಮೇಲೆ ಠೀವಿಯಿಂದ ಒಬ್ಬನು ಕುಳಿತುಕೊಂಡಿದ್ದನು. ಅವನೇ ವ್ಯಾಘ್ರದತ್ತನಿರಬೇಕೆಂದು ಸಮರಸೇನನು ಊಹಿಸಿಕೊಂಡನು. ಆಗ ಕಿವಿಯೊಡೆಯುವಂತಹ ಅವನ ಗಂಭೀರ ಧ್ವನಿ ಹೊರಟಿತು.

"ಸಮರಸೇನಾ! ನಾನೇ ವ್ಯಾಘ್ರದತ್ತ. ಬಾ! ನಿನಗೆ ವ್ಯಾಘ್ರ ಮಂಡಲದ ಪರವಾಗಿ ಸುಸ್ವಾಗತ ದೊಂದಿಗೆ ಅಭಿನಂದನೆ ಹೇಳುತ್ತೇನೆ. ಬಹುಶಃ ನಿನ್ನ ಪೂರ್ವಿಕರೂ ನನ್ನ ಪೂರ್ವಿಕರೂ ಕುಂಡಲಿನೀ ದ್ವೀಪದಲ್ಲಿ ಒಂದೇ ಪಟ್ಟಣವಾಸಿಗಳಾಗಿದ್ದಿರಬೇಕು. ಇಲ್ಲಿ, ಈ ಮಂತ್ರ ದ್ವೀಪದಲ್ಲಿ ಅವರ ಸಂತಾನ ಗಳಾದ ನಾವಿಬ್ಬರೂ ಹೀಗೆ ಹಠಾತ್ತಾಗಿ ಸಂಧಿಸು ವಂತಾಗಿದೆ. ನಿನಗೆ ಆಶ್ಚರ್ಯವಾಗುವುದಿಲ್ಲವೇನು?"

ವ್ಯಾಘ್ರದತ್ತನ ಮಾತಿಗೂ ಅಲ್ಲಿನ ಪರಿಸ್ಥಿತಿಗೂ ಸಂಬಂಧವೇನೂ ಕಾಣಲಿಲ್ಲ. ಅಭಿನಂದಿಸುವವನನ್ನು ಕುಳ್ಳಿರಿಸಲು ಒಂದು ಆಸನವೂ ಅಲ್ಲಿಲ್ಲ. ತಾನು ಬಂಧಿಸಲ್ಪಟ್ಟ ಕ್ಷಣದಿಂದ ನಡೆಯುವ ಪ್ರತಿ ಸಂಘಟನೆಯೂ ಆಶ್ಚರ್ಯಕರವಾಗಿಯೇ ಇತ್ತು. ಕುಂಡಲಿನೀ ದ್ವೀಪದ ಹೆಸರನ್ನು ಹೇಳಿ, ತಮ್ಮ ಪೂರ್ವಿಕರನ್ನು ನೆನಪಿಗೆತರುವ ವ್ಯಾಘ್ರದತ್ತನ ಧೋರಣೆ ಕೂಡಾ ಆಶ್ಚರ್ಯಕರವಾಗಿದ್ದಿತು. ಸಮರ ಸೇನನು ಧೈರ್ಯದಿಂದ ಮಾತಾಡಲು ತೊಡಗಿದನು:

"ವ್ಯಾಘ್ರದತ್ತಾ, ನನಗೆ ಪ್ರತಿಯೊಂದೂ ಏನೂ ತಿಳಿಯದ ಸಂಗತಿಯಾಗಿ ಆಶ್ಚರ್ಯವಾಗಿಯೇ ಕಾಣುತ್ತದೆ. ನಾನು ಇಲ್ಲಿ ಯಾರಿಗೂ ಯಾವ ಕೇಡೂ ಮಾಡಿದವನಲ್ಲ. ನಿನ್ನ ಕಡೆಯವರು ನನ್ನನ್ನು ಹೀಗೆ ಬಂಧಿಸಿ ತರಲು ಕಾರಣವೇನು ? ಅಸಲು ನೀವು ಈ ಭಯಂಕರ ದ್ವೀಪಕ್ಕೆ ಯಾವಾಗ ಬಂದಿರಿ ? ಏಕೆ ಬಂದಿರಿ ?"

ಈ ಪ್ರಶ್ನೆಗಳನ್ನು ಕೇಳಿ ವ್ಯಾಘ್ರದತ್ತನು, ಸಮರ ಸೇನನ ಮುಖವನ್ನು ಪರೀಕ್ಷಿಸುವಂತೆ ನೋಡುತ್ತ, ಕಣ್ಣುಗಳನ್ನು ಮಿಟುಕಿಸಿ, "ಸಮರಸೇನಾ, ನೀನು ನನ್ನ ಮುಂದೆ ಏನೂ ತಿಳಿಯದ ಪಾಪದವನಂತೆ ನಟಿಸಿ ಪ್ರಯೋಜನವಿಲ್ಲ. ನಾನು ಅದನ್ನು ನಂಬಲಾರೆ. ನಾನು ಹೇಳುವಂಥಾದ್ದನ್ನು ಪೂರ್ತಿ ಹೇಳುತ್ತೇನೆ ಕೇಳು. ಶಮನದ್ವೀಪದ ರಾಜನಾದ ಶಾಕ್ತೇಯನ ಸಮಾಚಾರ ನಿನಗೆ ಗೊತ್ತಿದೆ. ಅವನು ದೇಶಗಳ ಮೇಲೆ ದಂಡೆತ್ತಿ ಹೋಗಿ, ದೋಚಿಕೊಳ್ಳುತ್ತಾ, ನಮ್ಮ ಕುಂಡಲಿನೀ ದ್ವೀಪವನ್ನು ಕೂಡಾ ಭಾರಿಯಾಗಿ ಕೊಳ್ಳೆ ಹೊಡೆದಿದ್ದಾನೆ. ನಮ್ಮ ಪೂರ್ವಿಕರಲ್ಲಿ ದೃಢಕಾಯರಾಗಿದ್ದವರನ್ನು ಹಿಡಿದು ತನ್ನ ಗುಲಾಮ ರನ್ನಾಗಿ ಮಾಡಿದ್ದಾನೆ. ಮತ್ತೆ ಕೆಲವು ದೇಶಗಳನ್ನು ಕೊಳ್ಳೆ ಹೊಡೆಯಲು ಹಡಗುಗಳಲ್ಲಿ ಹೊರಟಿದ್ದಾನೆ. ಹಾಗೆಯೇ ಈ ದ್ವೀಪಕ್ಕೆ ಬಂದು ಸೇರಿದ ಆ ಶಾಕ್ತೇಯ ರಾಜನು, ಇಲ್ಲಿ ಮೃತ್ಯುವಿನ ಬಾಯಿಗೆಬಿದ್ದ ಸಂಗತಿ ಯನ್ನೂ ನೀನು ಕೇಳಿರಬಹುದು. ಅವನು ಸತ್ತ ಮೇಲೆ ಗುಲಾಮರಾಗಿ ಬಂಧಿಸಲ್ಪಟ್ಟಿದ್ದ ನಮ್ಮ ಪೂರ್ವಿಕರು ಸ್ವೇಚ್ಛೆ ಪಡೆದು ಈ ದ್ವೀಪದಲ್ಲಿ ವಾಸ ಸ್ಥಳವನ್ನು ಏರ್ಪಡಿಸಿಕೊಂಡಿದ್ದಾರೆ. ಹೀಗೆ ನಮ್ಮವರು ಸ್ವತಂತ್ರರಾಗಲಿಕ್ಕೆ ಶಾಕ್ತೇಯನ ಶಿಷ್ಯರಾದ ಇಬ್ಬರು ಮಾಂತ್ರಿಕರ ನಡುವೆ ಕೆರಳಿಕೊಂಡ ದ್ವೇಷವೂ ಸ್ವಲ್ಪ ಕಾರಣವಾಯಿತು. ಆ ಇಬ್ಬರು ಮಾಂತ್ರಿಕ ಶಿಷ್ಯರನ್ನು ನೀನು ಬಲ್ಲೆಯಷ್ಟೆ ?" ಎಂದನು.



"ಅದು ನಿಜ. ಅವರಿಬ್ಬರನ್ನು ಸ್ವಲ್ಪ ಮಟ್ಟಿಗೆ ಬಲ್ಲೆ" ಎಂದನು ಸಮರಸೇನ.

"ಹಾಗಾದರೆ ಈಗ ಹೇಳು. ಆ ಶಾಕ್ತೇಯನ ತ್ರಿಶೂಲವು ಎಲ್ಲಿದೆ ? ಚಂಡೀದೇವಿಯಿಂದ ಪ್ರಸಾದಿತ ವಾದ ಆ ತ್ರಿಶೂಲದ ಶಕ್ತಿ ಎಂತಹುದೆಂದು ನೀನು ಕೇಳಿಯೇ ಇರಬಹುದು" ಎಂದನು ವ್ಯಾಘ್ರದತ್ತ.

ತ್ರಿಶೂಲದ ಸಂಗತಿ ಕೇಳಿ ಸಮರಸೇನನು ಬೆರಗಾದನು. ವ್ಯಾಘ್ರದತ್ತನು ಶಾಕ್ತೇಯನನ್ನು ಕುರಿತು ಹೇಳಿದ ಸಂಗತಿಗಳು ಪೂರಾ ಸಮರಸೇನನಿಗೆ ಗೊತ್ತಿರಲಿಲ್ಲ. ಚತುರ್ನೇತ್ರನು ಒಂದುಸಾರಿ ಶಾಕ್ತೇಯ ನನ್ನು ಕುರಿತು ಸ್ವಲ್ಪ ಮಟ್ಟಿಗೆ ಹೇಳಿದ್ದನು. ಶಾಕ್ತೇಯನು ಕುಂಡಲಿನೀ ದ್ವೀಪವನ್ನು ಕೊಳ್ಳೆ ಹೊಡೆದ ಸಂಗತಿಯನ್ನು ಸಮರಸೇನನು ಕೇಳಿರಲಿಲ್ಲ. ಚಂಡೀದೇವಿ ಶಾಕ್ತೇಯನಿಗೆ ಪ್ರಸಾದಿಸಿದ ತ್ರಿಶೂಲದ ಸಮಾಚಾರವೂ ಸಮರಸೇನನಿಗೆ ತಿಳಿಯದು.

"ವ್ಯಾಘ್ರದತ್ತಾ, ನೀನು ಕೇಳಿದ ಪ್ರಶ್ನೆಗಳು ನನಗೆ

ಹೊಸದಾಗಿಯೇ ಇವೆ. ಅದಾವುದೂ ನನಗೆ ತಿಳಿಯದು. ನೀನು ತಪ್ಪಾಗಿ ಅನುಮಾನಿಸಿ ನನ್ನನ್ನು ಬಂಧಿಸಿ ತರಿಸಿರುವೆ. ಆ ಶಾಕ್ತೇಯನು ಏನೆಲ್ಲ ಮಾಡಿದನೆಂಬುದಾಗಲಿ, ತ್ರಿಶೂಲದ ಸಂಗತಿಯಾಗಲೀ ಸತ್ಯಪ್ರಮಾಣಕ್ಕೂ ನನಗೆ ತಿಳಿಯದು" ಎಂದನು ಸಮರಸೇನ. ಅದನ್ನು ಕೇಳಿ ವ್ಯಾಘ್ರದತ್ತನು ಕೋಪದಿಂದ ಕೆಂಗಣ್ಣು ಮಾಡಿಕೊಂಡು "ನೀನು ಪಾಪದವನಂತೆ ನಟಿಸಿ ನನ್ನನ್ನು ಮೋಸಪಡಿಸಲು ಸಾಧ್ಯವಿಲ್ಲ. ನಾಳೆ ಬೆಳಿಗ್ಗೆ ಹತ್ತು ಗಂಟೆಯ ವರೆಗೂ ನಿನಗೆ ಅವಕಾಶ ಕೊಡುತ್ತೇನೆ. ಅಷ್ಟರೊಳಗೆ, ನಿನಗೆ ಕ್ಷೇಮವಾಗಿರಬೇಕೆಂದಿದ್ದರೆ ನಿಜ ಸಂಗತಿಯನ್ನು ಹೇಳುಬಿಡುವುದು ಒಳ್ಳೆಯದು. ಅದಕ್ಕೆ ತಪ್ಪಿದೆಯಾದರೆ ನಿನ್ನನ್ನು ಚಿತ್ರಹಿಂಸೆಗೆ ಗುರಿಪಡಿಸಿ, ಭದ್ರಚಾಮುಂಡಿಗೆ ಬಲಿಗೊಟ್ಟು ಬಿಡುತ್ತೇನೆ. ಇಲ್ಲಿ ನಿನ್ನನ್ನು ಕಾಪಾಡುವವರು ಯಾರೂ ಇಲ್ಲವೆಂಬುದನ್ನು ಚೆನ್ನಾಗಿ ನೆನಪಿಟ್ಟುಕೋ!" ಎಂದನು ಭೀಕರ ಧ್ವನಿಯಿಂದ.




ಸಮರಸೇನನು ಏನೂ ಹೇಳದೆ ಮರಗಟ್ಟಿದಂತೆ ನಿಂತನು. ತನಗೆ ಸ್ವಲ್ಪವೂ ತಿಳಿಯದ ಸಮಾಚಾರವನ್ನು, ತಿಳಿದಿದೆ ಎಂಬ ಭ್ರಮೆಯಿಂದ ಬಲವಂತ ಮಾಡುತ್ತಿದ್ದಾನೆ. ಈ ತಪ್ಪು ಅವನಿಗೆ ತಿಳಿಯದ್ದರಿಂದ, ಮಾತಾಡಿ ಪ್ರಯೋಜನವಿಲ್ಲವೆಂದು ಸಮರಸೇನನಿಗೆ ಗೊತ್ತಾಯಿತು.

ವ್ಯಾಘ್ರದತ್ತನ ಆಜ್ಞೆಯಿಂದ ಇಬ್ಬರು ಭಟರು ಸಮರಸೇನನನ್ನು ಎಳೆದುಕೊಂಡು ಹೊರಟರು. ಒಂದು ಕತ್ತಲೆ ಕೋಣೆಯೊಳಗೆ ಅವನನ್ನು ಸೇರಿಸಿ, ಕೈ ಕಾಲುಗಳನ್ನು ಹಗ್ಗದಿಂದ ಕಟ್ಟಿ ಹಾಕಿದರು. ಆ ಕೋಣೆಯ ಒಂದು ಬದಿಯಲ್ಲಿ ಭಯಂಕರಾಕಾರದ ವಿಗ್ರಹ ನಿಂತಿದ್ದಿತು. ಅದೇ ಭದ್ರಚಾಮುಂಡೀ ವಿಗ್ರಹವಾಗಿರಬೇಕು.

ಭಟರು ಆ ವಿಗ್ರಹವನ್ನು ಸಮರಸೇನನಿಗೆ ತೋರಿಸಿ, "ನಾಳೆ ಬೆಳಿಗ್ಗೆ ಒಂದು ಜಾಮದೊಳಗೆ, ನಮ್ಮ ನಾಯಕನ ಮುಂದೆ ನಿಜ ಸಂಗತಿ ಹೇಳದೆ ಹೋದರೆ, ಈ ದೇವಿಗೆ ನೈವೇದ್ಯವಾಗುವುದು ಖಂಡಿತ. ಚೆನ್ನಾಗಿ ಆಲೋಚಿಸಿ ನಿರ್ಣಯಿಸಿಕೊ." ಎಂದು ಎಚ್ಚರಿಕೆ ಹೇಳಿ ಅಲ್ಲಿಂದ ಹೊರಗೆ ಹೋಗಿ ಬಾಗಿಲು ಮುಚ್ಚಿ ತಾಳ ಭದ್ರಮಾಡಿ ಹೋದರು.

ಮತ್ತೆ ಸಮರಸೇನನು ಯಾತನೆಗೆ ಬಿದ್ದನು. ಕೈ ಕಾಲುಗಳನ್ನು ಕದಲಿಸಲಾಗದ ನೋವಿನೊಂದಿಗೆ ಹಸಿವೆಯ ಸಂಕಟವೂ ಸೇರಿತ್ತು, ಬೆಳಗಾದ ಮೇಲೆ ಮರಣವೂ ಕಾದಿದೆ. ಇಂತಹ ಆಪತ್ತಿನ ಸಮಯದಲ್ಲಿ ಚತುರ್ನೇತ್ರನಂತಹ ಮಹಾ ಮಾಂತ್ರಿಕನ ಹೊರತು, ತನಗೆ ಸಹಾಯಮಾಡುವವರು ಮತ್ತಾರೂ ಕಾಣಲಿಲ್ಲ. ಆದರೆ ಚತುರ್ನೇತ್ರನಿಗೆ ತನ್ನ ಗತಿ ಹೀಗಾಗಿರುವ ಸಮಾಚಾರ ಹೇಗೆ ಗೊತ್ತಾದೀತು ?

ಕುಂಡಲಿನೀದೇವಿ ಪೂರ್ತಿ ತನ್ನ ಕೈ ಬಿಟ್ಟಳೆಂಬ ನಿರಾಶೆಯಿಂದ, ಸಾಯಲಿಕ್ಕೆ ಸಿದ್ಧನಾಗಿ ಅವಳನ್ನೇ ಧ್ಯಾನಿಸುತ್ತ, ಕಣ್ಣು ಮುಚ್ಚಿಕೊಂಡಿರಲು, ಮೆಲ್ಲ

ಮೆಲ್ಲನೆ ನಿದ್ದೆಯ ಮಂಪರು ಬರತೊಡಗಿತು. ಏನೋ ಶಬ್ದಕ್ಕೆ ಎಚ್ಚರವೂ ಆಯಿತು. ಯಾರೋ ಬಾಗಿಲು ತೆರೆಯುವ ಶಬ್ದ ಕೇಳಿ, ಬೆಳಗಾಯಿತೇನೋ, ಕೊಲೆಗಡಕರೇ ಬಂದರೇನೋ ಎಂದು ಪಿಳಿ ಪಿಳಿ ನೋಡಿದನು.

ಬಿಚ್ಚು ಗತ್ತಿಗಳನ್ನು ಹಿಡಿದ ಇಬ್ಬರು ಮನುಷ್ಯರು ಒಳಗೆ ಬಂದರು. ವ್ಯಾಘ್ರದತ್ತನ ಅಪ್ಪಣೆಯಿಂದ ಈಗಲೇ ತನಗೆ ಚಿತ್ರಹಿಂಸೆ ಪ್ರಾರಂಭವಾಗುವುದೆಂದು ಸಮರಸೇನನಿಗೆ ತೋರಿತು. ಅಷ್ಟರಲ್ಲಿ ಅವರು ಕತ್ತಿಗಳನ್ನು ಒರೆಗಿಳಿಸಿ, ಸಮರಸೇನನ ಕೈ ಕಾಲುಗಳ ಕಟ್ಟುಗಳನ್ನು ಬೇಗ ಬೇಗನೆ ಬಿಚ್ಚಿದರು. ತೆರೆದ ಬಾಗಿಲಲ್ಲಿ ಹೊರಗಿನ ಕತ್ತಲೆಯನ್ನೂ, ಆಕಾಶದ ನಕ್ಷತ್ರವನ್ನೂ, ಮಂದ ಬೆಳುದಿಂಗಳನ್ನೂ ನೋಡಿ ಇನ್ನೂ ಬೆಳಗಾಗಿಲ್ಲವೆಂದು ತಿಳಿಯಿತು. ಏನು ನಡೆಯುವುದೆಂದು ಸಮರಸೇನನು ಆಶ್ಚರ್ಯದಿಂದ ನೋಡುತ್ತಿರಲು, ಅವರು ಸಮರಸೇನನನ್ನು ತಮ್ಮ ಹಿಂದೆ ಬರಲು ಸಂಜ್ಞೆಮಾಡಿ, ಮುಂದೆ ನಡೆದರು. ಸಮರಸೇನನೂ ಅವರ ಹಿಂದೆಯೇ ನಡೆದನು. ಅವರು ಸಮರಸೇನನ ಬಾಯಿಗೆ ಕೈಯಿಟ್ಟು ಮಾತಾಡಬೇಡವೆಂದು ಸೂಚಿಸಿದರು.

ಅವರು ಕಳ್ಳರಂತೆ ಸಮರಸೇನನನ್ನು ಕರೆದುಕೊಂಡು ಸ್ವಲ್ಪ ದೂರ ಹೋಗಲು, ಆಯುಧಧಾರಿಗಳಾದ ಇಬ್ಬರು ಭಟರು ಅದೇ ಮಾರ್ಗದಲ್ಲಿ ಇದಿರಾಗಿ ಬರುವುದು ಕಂಡಿತು. ಕೂಡಲೇ ಸಮರಸೇನನನ್ನು ಕರೆದೊಯ್ಯುವವರು ಅವನನ್ನು ಒಂದು ಮನೆಯ ಬದಿಯ ಕತ್ತಲೆಯ ಕಡೆಗೆ ಕರೆದೊಯ್ದು ಅಡಗಿರಿಸಿಕೊಂಡರು.

"ಭಯವೇನಿಲ್ಲ. ನಾವು ನಿನ್ನ ಮಿತ್ರರೇ. ಅಲ್ಲಿ ಬರುವವರು ಗಸ್ತೀ ತಿರುಗುವ ವ್ಯಾಘ್ರದತ್ತನ ಸೇವಕರು. ನಾವು ಈ ಕತ್ತಲೆಯಲ್ಲಿ ಅಡಗಿದ್ದು, ಅವರು ಹತ್ತಿರ ಬಂದ ಕೂಡಲೇ ಅವರ ಮೇಲೆ ಬಿದ್ದು ಹತಮಾಡಿ ಬಿಡಬೇಕು. ಏಕೆಂದರೆ ಅವರು ಕತ್ತಲೆಯಲ್ಲಿಯೂ ಹುಡುಕಿ ಹಿಡಿಯುವವರು !" ಎಂದರು. ಮಿತ್ರರೆಂದು ಹೇಳಿದವರು ಮಾತು ನಿಲ್ಲಿಸುವಾಗಲೇ, ಗಸ್ತೀ ಭಟರು ಅಲ್ಲಿಗೇ ಬಂದರು. ಕೂಡಲೇ ಕತ್ತಲೆಯಲ್ಲಿ ಹೊಂಚಿಕೊಂಡಿದ್ದ ಮೂವರೂ ಮಿಂಚಿನ ವೇಗದಲ್ಲಿ ಅವರ ಮೇಲೆ ಹಾರಿ ಆ ಭಟರಿಗೆ ಕೂಗಲಿಕ್ಕೂ ಅವಕಾಶವಿಲ್ಲದಂತೆ, ಅವರ ಗಂಟಲನ್ನು ಇಕ್ಕುಳದ ಹಾಗೆ ಅಮುಕಿ ಹಿಡಿದು ಎಳೆದುಕೊಂಡು ಹೋಗಿ, ಸಮೀಪದಲ್ಲಿದ್ದೊಂದು ಪಾಳು ಬಾವಿಯೊಳಗೆ ದೂಡಿಬಿಟ್ಟರು. ಅಷ್ಟಾದ ಮೇಲೆ ಮೂವರೂ ಗುಡ್ಡದ ದಾರಿಯಲ್ಲಿ ನಡೆಯುತ್ತ, ಸೂರ್ಯೋದಯವಾಗುವ ಹೊತ್ತಿಗೆ ಯಾವುದೋ ಒಂದು ಚಿಕ್ಕ ಹಳ್ಳಿಯನ್ನು ಸೇರಿದರು. (ಇನ್ನೂ ಇದೆ)






## ೧೯

[ ಸಮರಸೇನನನ್ನು ಅಕಸ್ಮಾತ್ತಾಗಿ ಹಿಡಿದೊಯ್ದು ಸೆರೆಮನೆಯಲ್ಲಿ ಹಾಕಿದವರು ವ್ಯಾಘ್ರದತ್ತನ ಭಟರು. ವ್ಯಾಘ್ರದತ್ತನು ಸಮರಸೇನನೊಂದಿಗೆ, ಸತ್ತು ಹೋದ ಶಾಕ್ತೇಯನ ತ್ರಿಶೂಲದ ವಿಷಯ ಕೇಳಿದನು. ತನಗೇನೂ ತಿಳಿಯದೆಂದರೂ ನಂಬದೆ, ಸಮರಸೇನನನ್ನು ಕೊಲ್ಲಲು ನಿಶ್ಚಯಿಸಿದನು. ರಾತ್ರಿಯಲ್ಲಿ ಇಬ್ಬರು ಹೊಸಬರು ಸಮರಸೇನನನ್ನು ಬಂಧಮುಕ್ತಗೊಳಿಸಿ ಕರೆದುಕೊಂಡು ಹೋದರು. ]

ಸಮರಸೇನನನ್ನು ತಮ್ಮೊಂದಿಗೆ ಕರೆದೊಯ್ಯುವ ಆ ಇಬ್ಬರು ಭಟರು, ಅಲ್ಲಿ, ಇಲ್ಲಿ ಅಡಗುತ್ತ ಒಂದಾನೊಂದು ಹಳ್ಳಿಯ ಕಡೆಗೆ ಹೋಗುತ್ತಿದ್ದರು. ಹೋದ ಹೋದಂತೆ ಆ ಹಳ್ಳಿಯಲ್ಲಿ ಏನೋ ಗಲಾಟೆ ಎದ್ದಿರುವಂತೆ ಕಾಣುತ್ತಿತ್ತು. ಬಲವಾದ ಗರ್ಜನಾ ಧ್ವನಿಯಿಂದ ಕೆಲವರು ಗದರಿಸಿಕೊಂಡು ಓಡಾಡುತ್ತಿದ್ದರು. ಕೆಲವರು ತುಂಬಾ ಹೆದರಿ "ಅಯ್ಯೋ–ನಾವರಿಯೆವಪ್ಪಾ" ಎಂದು ಆರ್ತ ಸ್ವರದಿಂದ ಗೋಳಿಡುತ್ತಿದ್ದರು. ಸಮೀಪಹೋದಂತೆ ಅಲ್ಲಿಯ ಭಯಂಕರ ಸ್ಥಿತಿ ಕಾಣ ತೊಡಗಿತು. ಬಿಚ್ಚುಗತ್ತಿಗಳನ್ನು ಧರಿಸಿದ ವ್ಯಾಘ್ರದತ್ತನ ಭಟರು ಹಳ್ಳಿಯಲ್ಲಿರುವ ಮನೆಗಳನ್ನೆಲ್ಲಾ ಶೋಧಿಸಿಕೊಂಡಿದ್ದರು. ಭಯಭ್ರಾಂತರಾದ ಹಳ್ಳಿಯ ನಿವಾಸಿಗಳು ಅಕ್ಕಪಕ್ಕಗಳಲ್ಲಿರುವ ಕಾಡುಗಳ ಕಡೆಗೂ ಗುಡ್ಡಗಳ ಕಡೆಗೂ ಓಡುತ್ತಿದ್ದರು. ನಾಲ್ಕು ಕಡೆಗಳಿಂದಲೂ ಹೆಂಗುಸರ, ಮಕ್ಕಳ, ಮುದುಕರ ಆರ್ತನಾದಗಳು!

"ಶಿವದತ್ತನೆಲ್ಲಿದ್ದಾನೆ? ಹೇಳಿರಿ!" ಎಂದು ಕೂಗಿಕೂಗಿ ಕೇಳುತ್ತ ಸಿಕ್ಕಿದವರನ್ನೆಲ್ಲ ಭಟರು ಹಿಡಿದು ನಿಲ್ಲಿಸಿ ಪೀಡಿಸುತ್ತಿದ್ದರು. ಗೊತ್ತಿಲ್ಲದವರನ್ನು




ಹಿಂಸಿಸುತ್ತಿದ್ದರು. ಸಮರಸೇನನೂ ಭಟರೂ ಆ ಪರಿಸ್ಥಿತಿಯನ್ನು ತುಸುದೂರದಲ್ಲೇ ಅಡಗಿಕೊಂಡು ನೋಡಿದರು. ಅವರು ಹೋಗಬೇಕಾದ ಆ ಹಳ್ಳಿಗೆ, ಈ ಪರಿಸ್ಥಿತಿಯಲ್ಲಿ ಪ್ರವೇಶಿಸುವುದು ಸರಿಯಲ್ಲ ವೆಂದು ಸಮರಸೇನನನ್ನು ಕರೆದೊಯ್ಯುವ ಭಟರಿಗೆ ತೋರಿತು. ಏನು ಮಾಡುವುದೆಂದು ತೋರದೆ ಅವರು ಸಮರಸೇನನೊಂದಿಗೆ ಮರಗಳ ಹಿಂದೆ ಎಚ್ಚರದಿಂದ ಅಡಗಿದ್ದರು.

ಸಮರಸೇನನಿಗಂತೂ ಹಿಂದೂ ಮುಂದೂ ಒಂದೂ ತಿಳಿಯದು. ಹೊಸ ಪ್ರಶ್ನೆ ಬೇರೆ. ಯಾರು ಆ ಶಿವದತ್ತ ? ಅವನಿಗೂ ಈ ಹುಡುಕುವವರಿಗೂ ಏನು ಸಂಬಂಧ ? ಸಮರಸೇನನು ಮೆಲ್ದನಿಯಿಂದ ಭಟರನ್ನು ನೋಡಿ "ಶಿವದತ್ತನೆಂದರೆ ಯಾರೆಂದು ನಿಮಗೆ ಗೊತ್ತೇ ? ಅವನಿಗಾಗಿ ಹಳ್ಳಿಯವರನ್ನು ಹಿಂಸಿಸುವ ಆ ಭಟರು ವ್ಯಾಘ್ರದತ್ತನ ಗುಂಪಿನವರ ಹಾಗೆ ಕಾಣುತ್ತಾರಲ್ಲಾ ? ಏನು ವ್ಯವಹಾರವೋ ?" ಎಂದು ಕೇಳಿದನು. "ನಾವು ಆ ಶಿವದತ್ತರ ಕಡೆಯವರೇ. ಅವರೇ ನಮ್ಮ ನಾಯಕ. ಅವರ ಆಜ್ಞೆಯ ಕಾರಣದಿಂದಲೇ ನಾವು ನಿಮ್ಮನ್ನು ಸೆರೆಮನೆಯಿಂದ ಬಿಡಿಸಿ ಕರೆದೊಯ್ಯುತ್ತಿದ್ದೇವೆ. ಈಗ ಈ ಹಳ್ಳಿಯನ್ನೆಲ್ಲಾ ಅಲ್ಲಕಲ್ಲೋಲ ಮಾಡುವವರು ವ್ಯಾಘ್ರದತ್ತನ ಭಟರೇ, ನಾವೀಗ ವ್ಯಾಘ್ರದತ್ತನ ಭಟರಿಗೆ ಸಿಗಲೇ ಬಾರದು" ಎಂದು ಭಟರಲ್ಲೊಬ್ಬನು ಉತ್ತರಕೊಟ್ಟನು.

ಈ ಉತ್ತರದಿಂದ ಸಮರಸೇನನಿಗೆ ತೃಪ್ತಿ ಯಾಗುವುದಕ್ಕೆ ಬದಲಾಗಿ ಇನ್ನೂ ಆಶ್ಚರ್ಯದ ಪ್ರಶ್ನೆಯೇ ಎದ್ದು ನಿಂತಿತು. ತನಗೂ ಆ ಶಿವ ದತ್ತನಿಗೂ ಯಾವ ಸಂಬಂಧ ? ತನ್ನಿಂದ ಯಾವ ಪ್ರಯೋಜನಕ್ಕಾಗಿ ತನ್ನನ್ನು ಸೆರೆಮನೆಯಿಂದ ಬಿಡಿ ಸಿದ್ದಾನೆ ? ಅಲ್ಲದೆ ಶಿವದತ್ತನಿಗೂ ವ್ಯಾಘ್ರದತ್ತನಿಗೂ ಇಷ್ಟೊಂದು ವಿರೋಧವೇತಕ್ಕೆ ? ಈ ವಿರೋಧ ದೆಡೆಯಲ್ಲಿ ತನ್ನ ಗತಿ ಏನಾದೀತು ?

"ಓಹೋ ! ಹಾಗಾದರೆ ನಾವೀಗ ಏನು ಮಾಡ ಬೇಕು ?" ಎಂದು ಭಟರನ್ನು ಕೇಳಿದನು ಸಮರಸೇನ. ಆ ಭಟರು ಮೌನವಾಗಿ ಮುಖ ನೋಡಿಕೊಂಡರು. ಮುಂದೇನು ಮಾಡಬೇಕೆಂದು ತಿಳಿಯದೆ ಅವರೂ ಪ್ರಶ್ನೆಯೊಂದಿಗೆ ತೊಳಲುವಂತೆ ತೋರಿತು.

ಸ್ವಲ್ಪ ಹೊತ್ತಿನ ಮೇಲೆ ಆ ಭಟರಲ್ಲೊಬ್ಬನು "ಅಯ್ಯಾ, ಶಿವದತ್ತರು ನಿಮ್ಮನ್ನು ಈ ಹಳ್ಳಿಗೇ ತರಲು ಹೇಳಿದರು. ನಿಮ್ಮೊಡನೆ ಸ್ನೇಹ ಮಾಡಿಕೊಳ್ಳ ಬೇಕೆಂತಲೇ ನಮ್ಮನ್ನು ಈ ಕೆಲಸಕ್ಕೆ ನಿಯಮಿಸಿದ್ದಾರೆ. ಆದರೆ ಅವರು ಈ ಹಳ್ಳಿಯಲ್ಲಿರುವ ರಹಸ್ಯ ಅವರ ಶತ್ರುವಾದ ವ್ಯಾಘ್ರದತ್ತನಿಗೆ ಹೇಗೋ ಗೊತ್ತಾಯಿ ತೆಂದು ಕಾಣುತ್ತದೆ. ಆದ್ದರಿಂದಲೇ ಅವನ ಭಟರು ಈ ಹಳ್ಳಿಯನ್ನೆಲ್ಲಾ ಅಡಿ ಮೇಲು ಮಾಡುತ್ತಿದ್ದಾರೆ. ಇವರು ಹೀಗೆ ಬರುವರೆಂಬ ಗುಟ್ಟು ಶಿವದತ್ತರಿಗೆ ಮೊದಲೇ ಗೊತ್ತಾಗಿ, ಅವರು ಇಲ್ಲಿಂದ ಬೇರೆಲ್ಲಿಗೋ

ತಪ್ಪಿಸಿಕೊಂಡಿರಬೇಕು. ಅವರು ಎಲ್ಲಿಗೆ ಹೋದರೆಂದು ಗೊತ್ತಾಗದೆ ನಾವೇನೂ ಮಾಡುವಂತಿಲ್ಲ. ದೊಡ್ಡ ಇಕ್ಕಟ್ಟಿನಲ್ಲಿದ್ದೇವೆ " ಎಂದನು.

ತುಂಬ ಪೇಚಾಟದ ಪರಿಸ್ಥಿತಿ, ಶಿವದತ್ತನು ಎಲ್ಲಿಗೆ ಹೋಗಿ ಅಡಗಿಕೊಂಡಿರುವನೆಂಬ ಸಂಗತಿ ಗೊತ್ತಾದ ಹೊರತು ಗತ್ಯಂತರವಿಲ್ಲ. ತಾವೆಲ್ಲ ಯಾವ ಕ್ಷಣಕ್ಕೂ ಅಪಾಯದಲ್ಲಿ ಸಿಕ್ಕಿ ಬೀಳಬಹುದು. ಹೀಗೆ ಅವರು ನಾಲ್ಕು ಸುತ್ತಲೂ ಕಿವಿ ಹೊಂದಿಸಿಕೊಂಡಿರುವಾಗ, ಎಲ್ಲಿಂದಲೋ ಒಂದು ಸಿಳ್ಳಿನ ಧ್ವನಿ ಕೇಳಿಬಂದಿತು, ಅದು ಕಾಡು ಹಕ್ಕಿಯ ಧ್ವನಿಯಂತೆ ಒಂದು ಕ್ರಮಬದ್ಧ ವಾಗಿತ್ತು. ಅವರ ಹಿಂದೆ ತುಸು ದೂರದಲ್ಲಿದ್ದೊಂದು ಹೆಮ್ಮರದ ಮೇಲಿನಿಂದ ಆ ಸಿಳ್ಳು ಹೊರಡುತಿತ್ತು. ಕೂಡಲೇ ಮೂವರೂ ಆ ಸಿಳ್ಳಿನ ಪರಿಚಯವಿರುವ ವರಂತೆ ಆ ಕಡೆಗೆ ಹೋಗಿ ನೋಡಿದರು. ಆ ಮರದ ಕೊಂಬೆಯಲ್ಲಿದ್ದ ಒಬ್ಬ ವ್ಯಕ್ತಿ ಅವರ ಕಡೆಗೆ ಕೈಯಾಡಿಸುತ್ತಾ ಸಿಳ್ಳು ಹಾಕುತ್ತಿದ್ದನು. ಮರದ ಕೊಂಬೆಯಲ್ಲಿರುವ ಆ ವ್ಯಕ್ತಿ ತಮ್ಮ ಮಿತ್ರನೋ ಶತ್ರುವೋ ಎಂದು ಸಮರಸೇನನಿಗೆ ಸಂದೇಹವೆದ್ದಿತು. ತಾನು ಹೇಗಿದ್ದರೂ ಈ ಪ್ರಾಂತಕ್ಕೆ ಹೊಸಬನಾದುದರಿಂದ ತನ್ನನ್ನು ಕರೆದು ತಂದವರು ಹೇಗೆ ಮಾಡುವರೋ ಹಾಗೆ ಮಾಡುವುದರ ಹೊರತು ಬೇರೆ ಮಾರ್ಗ ತನಗಿಲ್ಲವೆಂದು ಅವನಿಗೆ ಗೊತ್ತಿತ್ತು. ಆ ಭಟರ ಮುಖದಲ್ಲಿ ಈಗ ಸ್ವಲ್ಪ ಆಶೆ ಕಾಣತಿತ್ತು.

ಸಮರಸೇನನೊಂದಿಗಿದ್ದ ಇಬ್ಬರಲ್ಲೊಬ್ಬನು ಇನ್ನೊಂದು ಧಾಟಿಯಲ್ಲಿ ಸಿಳ್ಳಿನ ಧ್ವನಿಯೆಬ್ಬಿಸಿದನು, ಅದಕ್ಕೆ ತಕ್ಕ ಹಾಗೆ ಮರದ ಕೊಂಬೆಯಲ್ಲಿದ್ದವನೂ ಸಿಳ್ಳು ಹೊಡೆದನು. ಏನೂ ಅರಿಯದವರಿಗೆ ಕಾಡು ಹಕ್ಕಿಗಳೆರಡು ಮಾತಾಡಿಕೊಂಡಂತಿತ್ತು ಆ ಧ್ವನಿಗಳು.

"ಅವನು ನಮಗೆ ಮಿತ್ರನೇ. ನಮ್ಮ ರಹಸ್ಯ ಸಂಕೇತವನ್ನು ತಿಳಿದನು. ಈ ಸಂಕೇತದ ಸಿಳ್ಳು ಶಿವದತ್ತನ ಕಡೆಯವರಿಗೆ ಹೊರತು ಬೇರೆಯವರಿಗೆ ತಿಳಿಯದು. ಬನ್ನಿರಿ, ಅಲ್ಲಿಗೆ ಹೋಗುವ " ಎಂದನು ಒಬ್ಬ ಭಟ.





ಸಮರಸೇನನೂ ಭಟರೂ ಆ ಸೈನಿಕನಿರುವ ಮರದ ಬಳಿಗೆ ಹೋದರು. ಅವರನ್ನು ನೋಡಿ ಮರದ ಮೇಲಿನವನು ಕೆಳಗಿಳಿದು ಬಂದನು. ಇಳಿದವನು ಹಳ್ಳಿಯ ಕಡೆಗೆ ಸ್ವಲ್ಪ ಹೊತ್ತು ನೋಡಿ, "ನಿಮಗಾಗಿಯೇ ಶಿವದತ್ತರು ನನ್ನನ್ನು ಇಲ್ಲಿ ಕಾವಲಿರಿಸಿದ್ದಾರೆ. ಈಗ ಮೂರನೇ ಜಾಮದಲ್ಲಷ್ಟೇ ವ್ಯಾಘ್ರದತ್ತನ ಭಟರು ಈ ಗ್ರಾಮಕ್ಕೆ ಧಾವಿಸಿ ಬಂದಿದ್ದಾರೆ. ಅದನ್ನು ಗೂಢಚಾರರಿಂದ ಮುಂದಾಗಿ ತಿಳಿದ ಶಿವದತ್ತರು, ತಮ್ಮ ಅನುಚರರೊಂದಿಗೆ ಆ ಮಾರ್ಗವಾಗಿ ತಪ್ಪಿಸಿಕೊಂಡರು. ನನ್ನನ್ನು ನೀವು ಕಾಣುವವರೆಗೂ ಇಲ್ಲೇ ಅಡಗಿರಲು ಹೇಳಿದರು" ಎಂದನು.

ಅವನು ಹೇಳಿದ ಮಾತನ್ನು ಕೇಳಿದ ಮೇಲೆ, ಅವರಿಗೆಲ್ಲ ಕಮರಿದ ಪ್ರಾಣಕ್ಕೆ ನೀರೆರೆದಂತಾಯಿತು. ಆದರೆ ಶಿವದತ್ತನು ಈಗ ಎಲ್ಲಿದ್ದಾನೆ? ಅವನನ್ನು ಕಲೆತುಕೊಳ್ಳುವುದು ಹೇಗೆ? ಇದು ಅವರಾರಿಗೂ ಗೊತ್ತಿಲ್ಲ.

"ಇವರೇ ಸಮರಸೇನರು. ವ್ಯಾಘ್ರದತ್ತನ ಬಂಧನದಿಂದ ಬಿಡಿಸಿಕೊಂಡು ಬಂದಿದ್ದೇವೆ. ಇವರು ಆದಷ್ಟು ಬೇಗ ಶಿವದತ್ತರನ್ನು ಕಲೆತುಕೊಳ್ಳಬೇಕಾಗಿದೆ. ಈಗ ಅವರು ಎಲ್ಲಿರಬಹುದು? ಏನೂ ಹೇಳಿಲ್ಲವೆ?" ಎಂದು ಒಬ್ಬನು ಪ್ರಶ್ನೆ ಮಾಡಿದನು.

ಅದಕ್ಕೆ ಮರದಿಂದಿಳಿದವನು, "ಅವರು ಎಲ್ಲಿಗೆ ಹೋಗುವರೆಂದು ನನಗೆ ಹೇಳಲಿಲ್ಲ. ಹೋದ ದಿಕ್ಕು ಗೊತ್ತಾದರೂ ಯಾವ ಕಡೆಗೆ ತಿರುಗಿದರೋ ನನಗೆ ಗೊತ್ತಿಲ್ಲ. ಈ ನಕ್ಷೆಯ ಕಾಗದವನ್ನು ನನ್ನ ಕೈಗೆ ಕೊಟ್ಟು ಹೋಗಿದ್ದಾರೆ. ಇದರಲ್ಲಿ ಅವರಿರುವ ಸ್ಥಳವನ್ನು ಗುರುತಿಸಿದ್ದಾರಂತೆ. ಇದನ್ನು ನೀವೇ ಪರಿಶೀಲಿಸಿ ನೋಡಬೇಕು. ನನಗಂತೂ ಏನೂ ಅರ್ಥವಾಗುವುದಿಲ್ಲ" ಎಂದು ಹೇಳಿ ತನ್ನ ದುಸ್ತಿನೊಳಗೆ ಇಟ್ಟುಕೊಂಡಿದ್ದ ಒಂದು ಕಾಗದದ ಸುರುಳಿಯನ್ನು ತೆಗೆದು ಸಮರಸೇನನಿಗೆ ಕೊಟ್ಟನು.

ಸಮರಸೇನನಿಗೂ ಪರಿಸ್ಥಿತಿ ಸ್ವಲ್ಪ ಮಟ್ಟಿಗೆ ಅರ್ಥವಾಯಿತು. ತಾನು ಸೆರೆಮನೆಯಿಂದ ತಪ್ಪಿದ ಕೂಡಲೇ ಅದು ವ್ಯಾಘ್ರದತ್ತನಿಗೆ ಗೊತ್ತಾಗಿ, ಶಿವದತ್ತನ ಶೋಧನೆಗೆ ತೊಡಗಿದ್ದಾನೆ.

ಸಮರಸೇನನು ಆ ಕಾಗದವನ್ನು ಬಿಡಿಸಿ ಬೆಳಂಜಾವದ ಪ್ರಕಾಶಕ್ಕೆ ಹಿಡಿದು ನೋಡಿದನು. ಅದರಲ್ಲಿ ಗುಡ್ಡ ಕಾಡುಗಳಲ್ಲಿ ಪಾಳುಬಿದ್ದಂತಹ ಕೆಲವು ಗೃಹಗಳೂ, ಪಾಳು ಬಾವಿಗಳೂ ಕೆರೆಗಳೂ ಚಿತ್ರಿಸಿರುವುದು ಕಂಡಿತು. ಪ್ರತಿ ಚಿತ್ರದ ಕೆಳಗೂ ಅದರ ಹೆಸರು ಕೂಡಾ ನಮೂದಿಸಿತ್ತು. ಆದರೆ ಶಿವದತ್ತನು ಎಲ್ಲಿ ಅಡಗಿರುವನೆಂಬುದು ಮಾತ್ರ ಗೊತ್ತಾಗಲಿಲ್ಲ. ಅದನ್ನು ಗೊತ್ತುಪಡಿಸುವಂತಹ ಗುರುತುಗಳೂ ಕಾಣಲಿಲ್ಲ. ಬಹುಶಃ ಶಿವದತ್ತನು ಈ ಹಳ್ಳಿಯ ಕಡೆಯಿಂದ ತೋರುವ ಬಾಣದ ಗುರುತಿನ ಪ್ರಕಾರ ತಪ್ಪಿಸಿಕೊಂಡು ಹೋಗಿರಬೇಕು. ಅದನ್ನು ನೋಡುತ್ತಾ, ಸಮರಸೇನನು ಹೀಗೆಂದನು:

"ಶಿವದತ್ತನು ಈ ಗುಡ್ಡಗಳಲ್ಲಿ ಪಾಳುಬಿದ್ದಿರುವ ಗೃಹಗಳ ಕಡೆಗೆ ಓಡಿದ್ದಾನೆ. ಅಪಾಯದಲ್ಲಿ ಸಿಕ್ಕಿದ ಅವನು ಈ ಪಾಳುಬಿದ್ದ ಗೃಹಗಳಾಚೆಗೆ ಓಡಿಗುದರ ಅರ್ಥವೇನೋ ಗೊತ್ತಾಗುವುದಿಲ್ಲ. ಅದು ಅವನ ಪರಿಚಿತ ಸ್ಥಳವಿರಬೇಕು. ಸುರಕ್ಷಿತವಾಗಿಯೂ ಇರಬಹುದು. ನಾವು ಆ ಕಡೆಗೆ ಹೋಗದೆ ಬೇರೆ ಗತಿ ಇಲ್ಲ".

ಇದಕ್ಕೆ ಅವರೆಲ್ಲರೂ ಒಪ್ಪಿಗೆಯನ್ನು ಸೂಚಿಸಿದರು. ಚಿತ್ರವನ್ನು ನೋಡಿ ದಾರಿ ತಿಳಿದು ಹೋಗುವ ಬಾಧ್ಯತೆ ಸಮರಸೇನನ ಮೇಲೆಯೇ ಬಿತ್ತು. ಅವನು ಒಮ್ಮೆ ಸಮೀಪದಲ್ಲಿರುವ ಹಳ್ಳಿಯ ಕಡೆಗೆ ನೋಡಿದನು. ಹಳ್ಳಿಯ ಮನೆಗಳಿಗೆಲ್ಲಾ ಬೆಂಕಿ ಬಿದ್ದು ಉರಿಯುತ್ತಿತ್ತು. ವ್ಯಾಘ್ರದತ್ತನ ಭಟರು ಕೂಗಾಡುತ್ತ ವಿನೋದಿಸುತ್ತಿರುವಂತೆ ಕಾಣುತಿತ್ತು. ದುಷ್ಟರ ಅಟ್ಟಹಾಸವನ್ನು ನೋಡಿ ಸಮರಸೇನನಿಗೆ ತುಂಬಾ ಕೋಪ ಬಂದಿತು. ಆದರೆ ತನ್ನೊಂದಿಗಿರುವ ಈ ಅಲ್ಪ ಬಲದೊಂದಿಗೆ ಅವರನ್ನು ಇದಿರಿಸುವು ದೆಂದರೆ ಆ ಬೆಂಕಿಗೆ ಹೋಗಿ ಬೀಳುವುದೇ ಸರಿ. ಇಲ್ಲಿಂದ ಕೂಡಲೇ ಹೊರಟು ಹೇಗಾದರೂ ಆ ಹೊಸ ಮಿತ್ರನಾದ ಶಿವದತ್ತನನ್ನು ಸೇರಬೇಕು. ಅವನ ಮೂಲಕ ತಾನು ತಿಳಿಯಬೇಕಾದ ಏನೋ ಮುಖ್ಯ ವಿಷಯವಿರಲೇಬೇಕು.

ಹೀಗೆ ಯೋಚಿಸಿ ಸಮರಸೇನನು ಆ ಪಟವನ್ನು ಪರೀಕ್ಷಿಸಿ ನೋಡಿ, ಭಟರಿಗೆ ತನ್ನ ಹಿಂದೆ ಬರುವಂತೆ ಹೇಳಿ ಮುಂದೆ ನಡೆದನು. ಪಟದಲ್ಲಿ ಸೂಚಿಸಿದ ದಿಕ್ಕನ್ನು ಅನುಸರಿಸಿಕೊಂಡು ಜಾಗರೂಕತೆಯಿಂದ ನಡೆಯಬೇಕಿತ್ತು. ಅಲ್ಲದೆ, ವ್ಯಾಘ್ರದತ್ತನ ಕ್ರೂರ ಭಟರು ದಾರಿಯಲ್ಲಿ ಅಡ್ಡಬರದಂತೆಯೂ ನೋಡ ಬೇಕಿತ್ತು. ಸ್ವಲ್ಪ ದೂರದವರೆಗೆ ಕಾಡು ದಾರಿಯಲ್ಲಿ ನಡೆದು ಅವರೆಲ್ಲ ಇನ್ನೊಂದು ಬದಿಯ ಗುಡ್ಡಗಾಡು ಪ್ರಾಂತವನ್ನು ತಲಪಿದರು. ಆ ಪ್ರದೇಶ ಚಿಕ್ಕವೂ




ದೊಡ್ಡವೂ ಆದ ದಿಣ್ಣೆ ಗುಡ್ಡಗಳಿಂದ ಎಲ್ಲಿ ನೋಡಿದರೂ ಏರು ತಗ್ಗುಗಳಾಗಿ ಕಾಣುತಿತ್ತು. ಎಲ್ಲಿಯೂ ಒಂದು ಕಾಲುದಾರಿಯಾಗಲೀ, ಮನುಷ್ಯರು ನಡೆದಾಡಿದ ಸುಳಿವಾಗಲೀ ಕಾಣುತ್ತಿರಲಿಲ್ಲ.

ಸಮರಸೇನನು ಒಂದು ದಿಣ್ಣೆಯ ಪ್ರದೇಶವನ್ನೇರಿ ಸುತ್ತಲೂ ನೋಡಿದನು. ಗುಡ್ಡಗಳ ಕೆಳಗೆ ಸಣ್ಣ ಕಣಿವೆಗಳಿರುವಂತೆ ಕಂಡಿತು. ಮೊದಲು ಆ ಕಣಿವೆಯ ಪ್ರದೇಶಕ್ಕೆ ಹೋದರೆ, ಆ ಮೇಲಿನ ಮಾರ್ಗವು ಮತ್ತೆ ತಿಳಿಯಬಹುದೆಂದು ಚಿತ್ರಪಟದ ಮೂಲಕ ವಾಗಿ ಊಹಿಸಿಕೊಂಡನು. ಒಂದು ವೇಳೆ ತಾವು ಬಂದ ದಾರಿಯೂ ಊಹನೆಗಳೂ ತಪ್ಪಾಗಿ ಹೋಗಿ ಬಿಟ್ಟರೆ ಇಷ್ಟು ಕಷ್ಟಪಟ್ಟದ್ದೆಲ್ಲವೂ ವ್ಯರ್ಥ ವಾದಂತೆಯೇ! ಆದರೆ ಪ್ರಸ್ತುತ ಪರಿಸ್ಥಿತಿಯಲ್ಲಿ ಎಲ್ಲಿಗೋ ಹೋಗದೆ ಉಪಾಯವಿಲ್ಲದ್ದರಿಂದ, ಸಮರಸೇನನು ಆ ಕಡೆಗೇ ಹೊರಟನು. ಇಳಿಜಾರಿನಲ್ಲಿ ಕಷ್ಟಪಟ್ಟು ಹೋಗುತ್ತಿದ್ದಂತೆ ಅಲ್ಲಿ ಯಾವ

ದಾರಿಯೂ ಇಲ್ಲದೆ ಮುದ್ದೆ ಮುದ್ದೆ ಯಾದ ಮುಳ್ಳು ಪೊದರುಗಳಿಂದ, ಕಲ್ಲು ಗುಪ್ಪೆಗಳಿಂದ ಸುತ್ತಲೂ ಗಜಿಬಿಜಿಯಾಗಿದ್ದಿತು.

ಎಲ್ಲಿಂದಲೋ ಒಂದು ಧ್ವನಿ ಕೇಳುತ್ತಿದ್ದಿತು. ಮುಂದೆ ಹೋದ ಹಾಗೆ ಅದು ನೀರಿಳಿತದ ಭೋರ್ಗರೆತವಾಗಿದೆಯೆಂದು ಗೊತ್ತಾಯಿತು. ಸ್ವಲ್ಪ ಉತ್ಸಾಹದಿಂದ ಮತ್ತಿಷ್ಟು ಮುಂದೆ ಹೋದ ಕೂಡಲೇ ಒಮ್ಮಿಂದೊಮ್ಮೆಗೇ ಪ್ರತ್ಯಕ್ಷವಾದ ಭಯಂಕರ ದೃಶ್ಯವು ಅವರನ್ನು ಸ್ತಂಭಿಸಿ ಬಿಟ್ಟಿತು.

ಎತ್ತರವಾದೊಂದು ಗುಡ್ಡದ ಅಂಚಿನಿಂದ ದೊಡ್ಡ ದೊಂದು ಜಲಪಾತವು ರಾಕ್ಷಸನೊಬ್ಬನ ಬಾಯಿ ಯೊಳಗಿನಿಂದ ಕೆಳಗೆ ಬೀಳುತ್ತಿದ್ದಿತು. ಗುಡ್ಡದ ಬಂಡೆಯಲ್ಲಿ ಅಂತಹ ರಾಕ್ಷಸಾಕಾರದ ಮುಖವನ್ನು ಕೆತ್ತಿ ಕೊರೆಯಲ್ಪಟ್ಟಿದೆ! ನೋಡುವವರಿಗೆ ಆ ಜಲಪಾತವು ರಾಕ್ಷಸನ ತಲೆಯಿಂದ ಹುಟ್ಟಿ ಬಾಯಿ ಯಿಂದ ಹೊರ ಬೀಳುವಂತಿತ್ತು.

"ಇದು ಬಹಳ ವಿಚಿತ್ರವೇ ಸರಿ. ಇಲ್ಲೆಲ್ಲಿಯೂ ಮಾನವರ ಇರುವಿಕೆಯೇ ಇಲ್ಲ. ಆದರೆ ಈ ಶಿಲೆಯಲ್ಲಿ ಇಂತಹ ರಾಕ್ಷಸನ ಬೊಂಬೆ ಕೊರೆದವರು ಕಲ್ಪನೆಯೂ ಕಲಾರಸನೆಯೂ ಇರುವ ಮನುಷ್ಯರೇ! ಅವರು ಯಾವ ಕಾಲದ ಮನುಷ್ಯರೋ?" ಎಂದು ಸಮರ ಸೇನನು ಆಶ್ಚರ್ಯಪಟ್ಟನು.

ಅವನೊಂದಿಗಿದ್ದ ಭಟರು ಆ ಭಯಂಕರ ದೃಶ್ಯ ವನ್ನು ನೋಡಿ ಸುಮ್ಮನಿದ್ದರು. ಹಾಗೆಯೇ ಪರೀಕ್ಷಿಸಿ ನೋಡಿದಾಗ ಆ ಜಲಪಾತದ ಹಿಂದಿನಿಂದ ಒಂದು ಸುರಂಗವಿರುವಂತೆ ಕಂಡು ಬಂತು. ಹಾಗಾದರೆ ಶಿವದತ್ತನು ಆ ಸುರಂಗದೊಳಗೆ ಹೊಕ್ಕು ಎಲ್ಲಿಗೋ ಹೋಗಿರಬೇಕೆಂದು ಸಮರಸೇನನಿಗೆ ಅನುಮಾನ ವಾಯಿತು. ನಕ್ಷೆಯಲ್ಲಿ ಗೆರೆಗಳ ಮೂಲಕ ತೋರಿಸಿದ್ದು ಈ ಜಲಪಾತವನ್ನೇ ಇರಬೇಕು. ಆ ಪ್ರದೇಶವು ಯಾರಿಗೂ ಅನುಮಾನ ಬಾರದಂತಹ ಸುರಕ್ಷಿತ



ಪ್ರದೇಶವಾಗಿದ್ದೀತು. ಚಿತ್ರಪಟವನ್ನು ಮತ್ತೆ ಮತ್ತೆ ನೋಡುತ್ತ, ತಾವು ಬಂದ ದಾರಿ ಸರಿಯೇ ಎಂಬಂತೆ ತಲೆಯಾಡಿಸಿ ಧೈರ್ಯಗೊಂಡನು. ಇನ್ನು ತಾವೆಲ್ಲ ಆ ಜಲಪಾತದೊಳಗೆ ತೂರಿ ಸುರಂಗ ಪ್ರವೇಶ ಮಾಡಬೇಕು.

ಹೀಗೆ ನಿರ್ಧರಿಸಿ ಭಟರಿಗೂ ಹೇಳಿ, ಸಮರಸೇನನು ಜಲಪಾತದ ನೀರಿಗಿಳಿದನು. ಭಟರೂ ಅವನನ್ನು ಅನುಸರಿಸಿದರು. ಹಾಗೆ ಅವರು ಇಷ್ಟ ದೈವವನು ಸ್ಮರಿಸುತ್ತಾ, ಜಲಪಾತದೊಳಗೆ ತೂರಿ ಪೂರ್ತಿ ಒದ್ದೆಯಾಗಿ ಅದರ ಹಿಂದಿದ್ದ ಸುರಂಗದೊಳಗೆ ಪ್ರವೇಶಿಸಿದರು. ಅದು ಸ್ವಲ್ಪ ಎತ್ತರದಲ್ಲಿದ್ದ ಸುರಂಗ ವಾದುದರಿಂದ ಅದರೊಳಗೆ ನೀರು ಪ್ರವೇಶಿಸುತ್ತಿದ್ದಿಲ್ಲ. ಅದು ಕೂಡ ಕೊರೆದು ಮಾಡಲ್ಪಟ್ಟ ಸುರಂಗವೇ.

ಕಗ್ಗತ್ತಲೆಯಾದ ಆ ಸುರಂಗದೊಳಗೆ ಕೈಗಳಿಂದ ಪರಡುತ್ತಾ ಸ್ವಲ್ಪ ದೂರ ಮುಂದೆ ಹೋದರು. ಆಮೇಲೆ ಇದ್ದಕ್ಕಿದ್ದ ಹಾಗೆ ಸೂರ್ಯಕಾಂತಿ ಪಸರಿಸಿದ

ಒಂದು ಸಮತಲ ಪ್ರದೇಶದಲ್ಲಿ ಸುರಂಗದಿಂದ ಹೊರಬಿದ್ದರು. ಆಶ್ಚರ್ಯ! ಪೂರ್ತಿ ಹೊಸ ಲೋಕದಂತೆ ಕಾಣುವ ಆ ಪ್ರದೇಶದಲ್ಲಿ ಸುತ್ತಲೂ ಎತ್ತರವಾದ ಬೆಟ್ಟಗಳೇ ಇದ್ದುವು.

ಹಾಗೆಯೇ ದೃಷ್ಟಿಯನ್ನು ನೆಲದಮೇಲೆ ಹರಡಿದಾಗ, ಅನೇಕ ನವಿಲುಗಳು ಗುಂಪು ಗುಂಪಾಗಿರುವುದನ್ನು ನೋಡಿ ಆಶ್ಚರ್ಯಪಟ್ಟರು. ಅವುಗಳಲ್ಲಿ ಕೆಲವು ನಾಟ್ಯವಾಡುತ್ತಿದ್ದುವು. ಮತ್ತೆ ಕೆಲವು ಆಕಾಶದಲ್ಲಿ ಕುಪ್ಪಳಿಸುತ್ತ, ಹಾರುತ್ತ, ಕೇಕೇ ಹಾಕುತ್ತಿದ್ದುವು.

"ಏನಿದು? ಇಷ್ಟೊಂದು ನವಿಲುಗಳು ಒಂದೇ ಪ್ರದೇಶದಲ್ಲಿರುವುದನ್ನು ನಾವೆಲ್ಲಿಯೂ ನೋಡಿರಲಿಲ್ಲ. ಯಾವುದೋ ಹೊಸಲೋಕಕ್ಕೆ ಬಂದ ಹಾಗಿದೆ. ಬೆಳಗಾಗಿ ಎಷ್ಟು ಹೊತ್ತಾಯಿತೆಂಬುದೂ ನಮಗೆ ಗೊತ್ತಾಗಿಲ್ಲ ನೋಡಿದಿರಾ? ಸೂರ್ಯನು ಉದಿಸಿ ಅಷ್ಟು ಮೇಲಕ್ಕೆ ಬಂದಿದ್ದಾನಲ್ಲ!" ಎಂದನು ಸಮರಸೇನ. ಅವನೊಂದಿಗಿರುವ ಭಟರು ಕೂಡಾ ಇಂತಹ ಜಲಪಾತವನ್ನಾಗಲೀ, ಇಂತಹ ನವಿಲುಗಳನ್ನಾಗಲೀ ಈ ವರೆಗೂ ನೋಡಿಲ್ಲವಂತೆ!

ಅವರು ಸ್ವಲ್ಪ ಹೊತ್ತು ಆ ನವಿಲುಗಳ ಸುಂದರವಾದ ನಾಟ್ಯ ಕೋಲಾಹಲವನ್ನು ನೋಡುತ್ತ, ದಣಿವಾರಿಸಿಕೊಂಡು ನಿಂತರು. ಆಮೇಲೆ ಅಲ್ಲಿಂದ ಕಾಲುಬಯ್ದುತ್ತ ನಡೆದು, ದೊಡ್ಡದೊಂದು ಬೆಟ್ಟದ ಗುಹೆಯನ್ನು ನೋಡಿ, ಆ ಕಡೆಗೆ ಹೋದರು. ಇಲ್ಲಿಗೆ ಬಂದ ಶಿವದತ್ತನು ಅದರೊಳಗೆ ಹೊಕ್ಕಿರಬಹುದೋ ಏನೋ? ಅವರು ಗುಹೆಯನ್ನು ಸಮೀಪಿಸುವ ವಷ್ಟರಲ್ಲಿ ಹೆದರಿ ಗಬಕ್ಕನೆ ಹಿಂದೆ ಹಾರಿಕೊಳ್ಳುವಂತಾಯಿತು! ಗುಹೆಯೊಳಗಿನಿಂದ ಒಂದು ಆನೆ ಅತಿ ರಭಸದಿಂದ ಹೊರಕ್ಕೆ ಓಡಿ ಬಂತು! ಅದು ಘೀಂಕಾರ ಮಾಡುತ್ತ ಹಾರಿದ ಹಾಗೆ ಹೊರಕ್ಕೆ ಬಂದ ಕೂಡಲೇ ಹೆದರಿ ಹಿಂಜರಿದ ಸಮರಸೇನನೂ ಭಟರೂ ತಲಾ ಒಂದೊಂದು ಕಡೆಗೆ ಓಡಿದರು. ಸಮರಸೇನನು ಸ್ವಲ್ಪ ದೂರ ಒಂದು ದೊಡ್ಡ ಬಂಡೆಗಲ್ಲಿನ ಹಿಂದೆ ಅಡಗಿಕೊಂಡನು. ಆನೆ ಅಷ್ಟೊಂದು ವೇಗವಾಗಿ ಗುಹೆಯೊಳಗಿನಿಂದ ಹೊರಗೆ ಹಾರಿ ಬರಬೇಕಾದರೆ, ಅದು ಗುಹೆಯೊಳಗಿರುವ ತನ್ನ ಪ್ರಬಲ ಶತ್ರುವಿನಿಂದ ಓಡಿಸಲ್ಪಟ್ಟಿರಬೇಕು. ಅಥವಾ ತಪ್ಪಿಸಿಕೊಂಡಿರಬೇಕು.

ಆನೆಯನ್ನು ಹೆದರಿಸಿದಂತಹ ಪ್ರಾಣಿ ಅದೇನಿರಬಹುದು? ಒಂದು ವೇಳೆ ತಾನು ಶಿವದತ್ತನು ಸೂಚಿಸಿದ ನಕ್ಷೆಯನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೆ, ತಪ್ಪಿಸಿಕೊಳ್ಳಲಾಗದ ಇಕ್ಕಟ್ಟಿನ ಪ್ರದೇಶಕ್ಕೆ ಬಂದು ಸಿಕ್ಕಿಕೊಂಡಿರಬಹುದೆ? ತನ್ನನ್ನೇ ನಂಬಿದ ಈ ಭಟರ ಕೋಪಕ್ಕೆ ತಾನು ಪಾತ್ರನಾಗಬಹುದೆ? ಹೀಗೆ ಸಮರಸೇನನು ಕೆಟ್ಟ ಅನುಮಾನಗಳಿಂದ ತಳಮಳಕ್ಕೊಳಗಾದನು. (ಇನ್ನೂ ಇದೆ)






## ೧೪

*[ಶಿವದತ್ತನ ಸೈನಿಕರ ಹಿಂದೆ ಸಮರಸೇನನು ಒಂದು ಹಳ್ಳಿಯನ್ನು ಸಮೀಪಿಸಿದನು. ಅಲ್ಲಿ ವ್ಯಾಘ್ರದತ್ತನ ಭಟರು ಹಳ್ಳಿಯನ್ನೇ ಸುಡುತ್ತಿದ್ದರು. ಆಗ ಶಿವದತ್ತನ ಅನುಚರನಿಂದ, ಶಿವದತ್ತನು ಎತ್ತಹೋಗಿರುವನೆಂದು ತಿಳಿಯಿತು. ಆ ದಾರಿಯಲ್ಲಿ ಹುಡುಕುತ್ತಾ ಹೋದ ಸಮರಸೇನಾದಿಗಳು ಗುಡ್ಡಗಳ ನಡುವೆ ಸಿಕ್ಕಿಕೊಂಡರು. ಆಗ ಒಂದು ಆನೆ ಗುಹೆಯಿಂದ ಹೊರಗೆ ಬಂತು.]*

ಗುಹೆಯಿಂದ ಹೊರಗೆ ಬಂದ ಆನೆ ಯಾವ ಕಡೆಗೆ ತಿರುಗುವುದೋ ? ಅದರ ಹಿಂದೆ ಇನ್ನೂ ಆನೆಗಳು ಬರುತ್ತವೋ ? ಅದೆಂಥಾ ಗುಹೆಯೋ ? ಎಂಬ ಭೀತಿಯಲ್ಲಿದ್ದರು ಎಲ್ಲರೂ. ದೊಡ್ಡದಾದ ಬಂಡೆಯ ಹಿಂದೆ ನಿಂತಿರುವ ಸಮರಸೇನನು ಆನೆಗೆ ಕಾಣುವಂತಿರಲಿಲ್ಲ. ಅವನೊಂದಿಗಿದ್ದ ಸೈನಿಕರು ಜೀವವನ್ನು ಅಂಗೈಯಲ್ಲಿಟ್ಟುಕೊಂಡು ಯಾವ ಕ್ಷಣದಲ್ಲಿ ಏನಾಗುವುದೋ ಎಂದು ನಡುಗುತ್ತಿದ್ದರು. ದೊಡ್ಡದೊಂದು ಆನೆಗಳ ಮಂದೆಯೇ ಸುರಂಗದೊಳಗಿನಿಂದ ಹೊರಬಿದ್ದು ತಮ್ಮನ್ನೆಲ್ಲ ನಜ್ಜುಗುಜ್ಜು ಮಾಡಿ ತುಳಿದು ಬಿಡುವುದೆಂದುಕೊಂಡು ಅವರು ನಡುಗುತ್ತಿದ್ದರು. ಓಡಲಿಕ್ಕೆ ಸಾಧ್ಯವಿಲ್ಲದಂಥ ಚಿಕ್ಕ ಪ್ರದೇಶದಲ್ಲಿ ಅವರೆಲ್ಲ ಸಿಕ್ಕಿ ಬಿದ್ದಿದ್ದರು.

ಹೀಗೆ ಹೆದರಿಕೊಂಡಿರುವವರ ಕಿವಿಗಳಿಗೆ, ಒಂದೇ ಸಾರಿ ಇಬ್ಬರು ಮೂವರು ಅರಚಿಕೊಂಡಂತೆ ಅಸ್ಪಷ್ಟವಾದ ಆರ್ತನಾದಗಳು ಎಲ್ಲಿಂದಲೋ ಆಗಾಗ ಕೇಳಿ ಬರುತ್ತಿದ್ದುವು. ಆ ಧ್ವನಿ ಗುಹೆಯ ಆಚೆಯ ಕಡೆಯಿಂದ ಹೊರಡುತ್ತಿದ್ದಿತು. ಆದರೆ ಸಮರಸೇನನೂ ಭಟರೂ ಅಡಗಿರುವ ಪ್ರದೇಶದಿಂದ ಹೊರಬೀಳಲು ಹೆದರುತ್ತಿದ್ದರು. ಅವರು ಆ ದೊಡ್ಡ ಆನೆಯನ್ನೇ




ನೋಡಿಕೊಂಡಿರಲು, ಆನೆ ಎಲ್ಲಾ ದಿಕ್ಕುಗಳಿಗೂ ತಲೆಯನ್ನೂ ಮೈಯನ್ನೂ ತಿರುಗಿಸಿ ನೋಡಿ, ಈ ಮೊದಲು ಸಮರಸೇನಾದಿಗಳು ಹೊಕ್ಕು ಬಂದಿದ್ದ ಜಲಪಾತದ ಗವಿಯೊಳಗೇ ಹೊಕ್ಕಿತು. ಸ್ವಲ್ಪ ಹೊತ್ತಿಗೆ ಅದು ಜಲಪಾತದೊಳಗೆ ತೂರಿಕೊಂಡು ಹೋಗುವುದು ಕೂಡ ಪಾರದರ್ಶಕದ ಹಾಗೆ ಕಾಣಿಸಿತು. ಬೇರೆ ಯಾವ ಆನೆಗಳ ಭಯವೂ ಬಾರದೆಂದು ಗಟ್ಟಿಮಾಡಿಕೊಂಡು, ಸಮರಸೇನನು ಅಡಗಿದ್ದ ಬಂಡೆಯ ಮರೆಯಿಂದ ಹೊರಗೆ ಬಂದನು. ಆ ಕೂಡಲೇ ಭಟರುಗಳೂ ಅಡಗಿದ ಪ್ರದೇಶದಿಂದ ಹೊರಬಿದ್ದು ಅವನ ಬಳಿಗೆ ಬಂದರು.

ಗುಹೆಯ ಆಚೆಯ ಕಡೆಯಿಂದ ಹೊರಡುವ ಆರ್ತನಾದವು ಆಗಾಗ ಕೇಳಿಕೊಂಡೇ ಇದ್ದಿತು. ಈಗ ಅವರೆಲ್ಲರ ಲಕ್ಷ್ಯ ಆ ಕಡೆಗೆ ಹರಿಯಿತು.

"ಯಾರೋ ದೊಡ್ಡ ಕಷ್ಟದಲ್ಲಿ ಸಿಕ್ಕಿಕೊಂಡ ಹಾಗಿದೆ" ಎಂದನು ಒಬ್ಬ ಸೈನಿಕ.

"ಹೌದು. ಅದಕ್ಕೆ ಸಂದೇಹವೇ ಇಲ್ಲ. ಆ ಶಬ್ದ ಬರುವ ಕಡೆಯಿಂದಲೇ ಆನೆ ಹಾಗೆ ಹೆದರಿ ಓಡಿ ಬಂದಿತ್ತು. ಅಷ್ಟೊಂದು ಭಯಂಕರವು ಏನಿರಬಹುದು ಅಲ್ಲಿ ? ಒಂದು ವೇಳೆ ಶತ್ರುಗಳು ನಮಗಾಗಿಯೇ ಎಂತಹ ಮೋಸದ ಬಲೆಯನ್ನೋ ಹರಡಿರಬಹುದೇ? ಅದು ನಿಜವಾಗಿಯೂ ಆರ್ತನಾದವೋ, ಅಥವಾ..." ಎಂದು ಸಮರಸೇನನು ಹೇಳುವಷ್ಟರಲ್ಲಿ, ಅಲ್ಲೇನೋ ದೊಡ್ಡ ಕಲ್ಲೋಲವೆದ್ದಂತೆ ಹಲವು ಆರ್ತ ಸ್ವರಗಳು ಕರ್ಕಶವಾಗಿ ಎದ್ದುವು. ಏನೋ ದೊಡ್ಡ ಗಂಡಾಂತರವು ಅವರ ಮೇಲೆ ಮಗುಚಿ ಬೀಳುವಹಾಗಿದೆ.

ಇನ್ನು ಆಲೋಚಿಸುತ್ತಾ ಹೊತ್ತು ಕಳೆಯುವುದು ಒಳ್ಳೆಯದಲ್ಲವೆನಿಸಿತು ಸಮರಸೇನನಿಗೆ. ಗುಹೆಯಾಚೆಗೆ ಆರ್ತನಾದ ಹೊರಡಿಸುವವರು ಶತ್ರುಗಳಾದರೂ, ಮಿತ್ರರಾದರೂ ಏನೋ ತುಂಬಾ ಅಪಾಯದಲ್ಲಿದ್ದಾರೆ. ಧೈರ್ಯದಿಂದ ಹೋಗಿ ಅವರನ್ನು ನೋಡುವುದೇ ಒಳ್ಳೆಯದು.

ಹೀಗೆ ನಿಶ್ಚಯಿಸಿ ಸಮರಸೇನನು ಭಟರಿಗೆ ಎಚ್ಚರಿಕೆ ಹೇಳಿ ಮುಂದೆ ನಡೆದನು. ಆ ಗುಹೆಯೊಳಗೆ ಸ್ವಲ್ಪ ದೂರ ಹೋಗುವಷ್ಟರಲ್ಲಿ ಗುಹೆಯ ಆಚೆಯದ್ವಾರವು ಅವರನ್ನು ಹೊರಬಿಟ್ಟಿತು. ಅಲ್ಲಿ ಮಡುವಿನ ಹಾಗೆ ಒಂದು ಸರೋವರವಿದ್ದಿತು. ಅದರಲ್ಲಿ ಬೀಳಲು ಬಿಟ್ಟ ಕೆಲವು ಮರಗಳೂ ದಟ್ಟವಾಗಿ ಬೆಳೆದ ಜೊಂಡು ಹುಲ್ಲುಗಳೂ ಇದ್ದುವು.

ಸಮರಸೇನನು ನೋಡುತ್ತಾ ಸ್ವಲ್ಪ ಮುಂದೆ ಹೋಗಲು, ಕಾಲು ಮುಳುಗುವಷ್ಟಿದ್ದ ನೀರಿನಲ್ಲಿ ನೆಡಲ್ಪಟ್ಟಿದ್ದ ಮೂರು ಕಂಬಗಳೂ, ಅವುಗಳಿಗೆ ಕಟ್ಟಲ್ಪಟ್ಟಿದ್ದ ಮೂವರು ಮನುಷ್ಯರೂ ಕಂಡು ಬಂದರು. ಅವರೇ ಹೆದರಿ ಬಿದ್ದು ಆಗಾಗ ಕಿರಿಚುತ್ತಿದ್ದಾರೆ. ಸಮರಸೇನನನ್ನು ನೋಡಿದ ಕೂಡಲೇ ಆ ಹತಭಾಗ್ಯರು ಇನ್ನಷ್ಟು ದೊಡ್ಡ ಆರ್ತನಾದಗಳನ್ನು ಅವಸರವಸರವಾಗಿ ಮಾಡತೊಡಗಿದರು.

ಏನು ಸಮಾಚಾರವೆಂದು ಸಮರಸೇನನಿಗೂ ತಿಳಿಯದು. ಅವನ ಭಟರಿಗೂ ತಿಳಿಯದು. ಕಂಬಗಳಲ್ಲಿ ಕಟ್ಟಲ್ಪಟ್ಟಿರುವವರಿಗೆ ತತ್‌ಕ್ಷಣದಲ್ಲಿ ಏನು ಆಪತ್ತು ಕಾದಿದೆಯೋ ಅವರಿಗೆ ಗೊತ್ತಾಗಲಿಲ್ಲ. ಅಲ್ಲೆಲ್ಲಿಯೂ ಬೇರೊಂದು ಪ್ರಾಣಿಯೂ ಇರಲಿಲ್ಲ. ತಮ್ಮನ್ನು ನೋಡಿದರೂ ಸಹ ಅವರೇಕೆ ಅಷ್ಟು ಜೋರಾಗಿ ಕಿರಿಚುತ್ತಾರೆ ? ನೀರಿನ ಅಡಿಯಲ್ಲ ಯಾರಾದರೂ ಅವರನ್ನು ಕಾಡುತ್ತಿದ್ದಾರೆಯೆ ? ಏನಾದರೂ ಮಂತ್ರಮಾಯೆ ನಡೆದಿದೆಯೆ ?

ಕಂಬಕ್ಕೆ ಕಟ್ಟಲ್ಪಟ್ಟವರ ಹತ್ತಿರ ಹೋಗ ಬೇಕಾದರೆ ಸಮರಸೇನನು ನೀರಿಗೆ ಇಳಿದು ಸ್ವಲ್ಪ ದೂರ ನಡೆಯಲೇಬೇಕು. ಮಡುವಿನ ನೀರು ಅಷ್ಟೇನೂ ಆಳವಾಗಿಲ್ಲವೆಂದು ಅಲ್ಲೆಲ್ಲ ಬೆಳೆದಕೊಂಡು ಹುಲ್ಲುಗಳಿಂದ ಊಹಿಸಬಹುದಾಗಿತ್ತು. ಸಮರಸೇನನು, ಕತ್ತಿಯನ್ನೂ, ಬಾಣಗಳ ಬತ್ತಳಿಕೆಯನ್ನೂ ಜಾಕರೂಕತೆಯಿಂದ ಸಿದ್ಧಪಡಿಸಿಕೊಂಡು, ನೀರಿಗೆ ಇಳಿದು ಜೊಂಡುಗಳನ್ನು ಸರಿಸುತ್ತಾ ಮುಂದೆ ಸಾಗತೊಡಗಿದನು. ಸೈನಿಕರು ಅವನನ್ನು ಅನುಸರಿಸಿ ತೀರದಲ್ಲಿ ನಡೆಯುತ್ತಿದ್ದರು. ಇದ್ದಕ್ಕಿದ್ದ ಹಾಗೆ ಕಂಬದಲ್ಲಿ ಬಂಧಿತರಾದ ಮೂವರೂ ಒಮ್ಮೆಗೇ ಮತ್ತೊಮ್ಮೆ ಕೆಟ್ಟ ದನಿಯಿಂದ ಕೂಗಿದರು. ಮರುಕ್ಷಣದಲ್ಲಿ ಸರೋವರದ ನೀರೆಲ್ಲಾ ಅಲ್ಲಕಲ್ಲೋಲವಾಯಿತು. ಸಮರಸೇನನು ಬೆರಗಾಗಿ ನೋಡುತ್ತಿರಲು, ಇದಿರಿನಲ್ಲಿದ್ದ ಆಳವಾದ ಮಡುವಿನ ಕಡೆಯಿಂದ ದೊಡ್ಡದೊಂದು ಮೊಸಳೆ ಬ್ರಹ್ಮಾಂಡವಾದ ಬಾಯಿಯನ್ನು ತೆರೆದು, ದೊಡ್ಡದಾದ ಕೋರೆ ಹಲ್ಲುಗಳನ್ನು ಚಾಚಿಕೊಂಡು ಮುಂದಕ್ಕೆ ಬರುತ್ತಿದ್ದಿತು. ಕಂಬದಲ್ಲಿ ಕಟ್ಟಲ್ಪಟ್ಟವರ ಆರ್ತನಾದಗಳಿಗೆ ಅದೇ ಕಾರಣವೆಂದು ಈಗ ಸಮರಸೇನನಿಗೆ ಗೊತ್ತಾಯಿತು.

ಸಮರಸೇನನು ಕತ್ತಿಯನ್ನು ಒರೆಗಿಳಿಸಿ, ಬಾಣವನ್ನು ತೆಗೆದು ಬಿಲ್ಲಿಗೆ ಹೂಡಿ ನಾರನ್ನೆಳೆದು ಗುರಿ ನೋಡ ತೊಡಗಿದನು. ಮೊಸಳೆ ಬಾಲವನ್ನು ಕುಣಿಸಿಕೊಂಡು, ವೇಗವಾಗಿ ಮುಂದಕ್ಕೆ ಬರುತ್ತಿರಲು, ಆಳವಿನೊಳಗೆ ಬಂದ ಕೂಡಲೇ ಸಮರಸೇನನು





ಬಾಣವನ್ನು ಬಿಟ್ಟನು. ಮೊಸಳೆಯ ತೆರೆದ ಬಾಯೊಳಗೆ ಗಂಟಲಲ್ಲಿ ಚುಚ್ಚಿಕೊಂಡಿತು ಆ ಬಾಣ. ಈ ಪೆಟ್ಟಿನಿಂದ ಮೊಸಳೆ ನೀರಿನಲ್ಲಿ ಹೊರಳಾಡುತ್ತ, ಮತ್ತೆ ಮುಂದೆ ಬರತೊಡಗಿತು. ಈಗ ಅದರ ಕಣ್ಣುಗಳು ಕೋಪದಿಂದ ಮಿರಿಮಿರಿ ಹೊಳೆಯುತ್ತಿದ್ದುವು.

ತಡಮಾಡದೆ ಸಮರಸೇನನು ಕತ್ತಿಯನ್ನು ಎತ್ತಿಕೊಂಡು ಅದರ ಮೇಲೆ ಲಂಘಿಸಿ, ಅದರ ಬೆನ್ನಿನ ಮೇಲೆ ಬಲವಾಗಿ ಎರಡು ಸಾರಿ ಹೊಡೆದನು. ಇದು ಮೊಸಳೆಗೆ ಮರಣಾಘಾತವಾಗಿ ಪರಿಣಮಿಸಿ ನೀರಿನಲ್ಲಿ ಚಡಪಡಿಸ ತೊಡಗಿತು. ಅದುವರೆಗೂ ಭಯಕಂಪಿತರಾಗಿ ನೋಡುತ್ತಿದ್ದ ಕಂಬದಲ್ಲಿ ಕಟ್ಟಲ್ಪಟ್ಟ ಆರ್ತರು, ಪ್ರಾಣದ ಮೇಲೆ ನಂಬುಗೆಯುಂಟಾಗಿ "ಬದುಕಿದೆವಪ್ಪಾ" ಎಂದು ಕೂಗಿಕೊಂಡರು.

ಸಮರಸೇನನು ಅವರ ಬಳಿಗೆ ಹೋಗಿ ಅವರ ಮುಖಗಳನ್ನು ನೋಡಿದ ಕೂಡಲೇ "ಆ! ನೀವಾ!" ಎಂದು ಅತ್ಯಾಶ್ಚರ್ಯದಿಂದ ಕೂಗಿದನು. ಆ ಮೂವರೂ, ಸಮರಸೇನನೊಂದಿಗಿದ್ದ ಅವನ ಸಂಗಾತಿ ಸೈನಿಕರೇ. ಹುಲಿಯ ಗುಹೆಯೊಳಗಿಂದಾಗಿ ಅವನು ವ್ಯಾಘ್ರದತ್ತನ ಭಟರ ಕೈಗೆ ಸಿಕ್ಕಿ ಬೀಳುವವರೆಗೂ ಅವನೊಂದಿಗಿದ್ದವರೇ! ಆದರೆ ಮೂವರೇ ಇರುವರಲ್ಲ? ನಾಲ್ಕನೆಯವನೆಲ್ಲಿ? ಅವನಿಗೇನಾಯಿತು? ಆ ಮೊಸಳೆ ನುಂಗಿಬಿಟ್ಟಿತೆ?

ತಮ್ಮ ಒಡೆಯನ ಗುರುತು ಹಿಡಿದ ಕೂಡಲೇ ಆ ಮೂವರು ಸೈನಿಕರೂ ಆನಂದಾಶ್ಚರ್ಯಗಳಿಂದ, "ಆಹಾ! ನಮ್ಮ ದೊರೆಗಳು! ನಮ್ಮ ಪ್ರಾಣಗಳನ್ನು ಉಳಿಸಿದರು! ನಮ್ಮನ್ನು ಕಾಪಾಡಿದರು! ಸೇನಾನಿ ದೊರೆಗಳೇ! ಇನ್ನು ಈ ಜನ್ಮದಲ್ಲಿ ನಾವು ನಿಮ್ಮನ್ನು ನೋಡುವೆವೆಂದುಕೊಳ್ಳಲಿಲ್ಲ" ಎಂದನು ಗದ್ಗದಿತನಾಗಿ ಒಬ್ಬ ಸೈನಿಕ.

"ನೀವು ಮೂವರೇ ಇದ್ದೀರಲ್ಲಾ? ನಾಲ್ಕನೇಯವನೆಲ್ಲಿ?" ಎಂದು ಸಮರಸೇನನು ಕೇಳಿದನು.

"ಅವನನ್ನು ನೀವು ಕೊಂದ ಮೊಸಳೆ ಹೊಟ್ಟೆಯೊಳಗೆ ಹಾಕಿಕೊಂಡಿತು. ಆಮೇಲೆ ನೀರು ಕುಡಿಯಲು ಬಂದ, ಒಂದು ಆನೆಯನ್ನೂ ನುಂಗಿತು. ಅದಾದ ಮೇಲೆ ನಮ್ಮ ಕಡೆಗೆ ಬರುವಾಗಲೇ ನಿಮ್ಮಿಂದ ಸತ್ತುಹೋಯಿತು! ನೀವು ಸ್ವಲ್ಪ ತಡ ಮಾಡುತ್ತಿದ್ದರೆ ನಾವೂ ಆ ಮೊಸಳೆಗೆ ಬಲಿಯಾಗುತ್ತಿದ್ದೆವು. ನೀವು ನಮ್ಮ ಪಾಲಿನ ದೇವರಾದಿರಿ" ಎಂದರು ಸೈನಿಕರು.

"ನನ್ನ ಸಂಗಾತಿಗಳಲ್ಲಿ ಇನ್ನೊಬ್ಬನೂ ಮೊಸಳೆಗೆ ಬಲಿಯಾದನೆ? ಹುಂ! ನಿಮ್ಮನ್ನು ಈ ಕಂಬಗಳಲ್ಲಿ ಕಟ್ಟಿದವರು ಯಾರು?" ಎಂದು ಸಮರಸೇನನು ಕೇಳಿದನು.

ಅಷ್ಟರಲ್ಲಿ ಸಮರಸೇನನಿಂದ ಕಟ್ಟುಬಿಚ್ಚಲ್ಪಟ್ಟ ಆ ಸೈನಿಕರು ಮಡುವಿನಿಂದ ಮೇಲೆ ಬರುತ್ತ, ನಡೆದ ಸಮಾಚಾರವನ್ನು ಕೆಲವೇ ಮಾತುಗಳಲ್ಲಿ ಹೇಳಿದರು. ಅವರು ತಮ್ಮ ನಾಯಕನನ್ನು ಹುಡುಕುತ್ತ, ಆ

ಗುಹೆಯೊಳಗೆ ಹೊಕ್ಕು ಹಿಂದಿನ ದ್ವಾರದಿಂದ ಹೊರಗೆ ಬಂದು ಈ ಕಡೆಗೇ ಬಂದಿದ್ದಾರೆ. ಆಗ ವ್ಯಾಘ್ರದತ್ತನ ಭಟರು ಅವರನ್ನು ಬಂಧಿಸಿ, ಅವನ ಆಜ್ಞೆಯಂತೆ ಈ ಮಡುವಿಗೆ ತಂದು ಆ ಮೂರು ಕಂಬಗಳಿಗೆ ಕಟ್ಟಿದ್ದಾರೆ. "ಒಬ್ಬನನ್ನು ಮೊದಲೇ ಮೊಸಳೆಯ ಬಾಯಿಗೆ ಹಾಕಿ ಬಿಟ್ಟರು. ನಾವು ಒಬ್ಬರ ತರುವಾಯ ಒಬ್ಬರಂತೆ ಅದಕ್ಕೆ ನೈವೇದ್ಯವಾಗುತ್ತಿದ್ದೆವು. ಅವರು ನಮ್ಮನ್ನು ಇಲ್ಲಿ ಕಟ್ಟಿ ಹಾಕಿ ಹೋಗಿ ಬಹಳ ಹೊತ್ತೇನೂ ಆಗಲಿಲ್ಲ. ಆ ಮರಗಳ ಹಿಂದೆ ಹೋಗಿ ನೋಡಿದರೆ ಅವರು ಹೊರಟು ಹೋದ ಕಾಲುದಾರಿಯ ಚಹರೆ ಕಾಣಬಹುದು" ಎಂದರು ಸೈನಿಕರು.

ಎಲ್ಲರೂ ಆ ಕಡೆಯ ಮರಗಳಾಚೆಗೆ ಹೋಗಿ ನೋಡಿದರು, ದೂರದಲ್ಲಿ ತನ್ನ ಭಟರೊಂದಿಗೆ ಸಾಲಾಗಿ ನಡೆದು ಹೋಗುತ್ತಿದ್ದವನು ವ್ಯಾಘ್ರದತ್ತನೆಂದು ಸಮರಸೇನನಿಗೆ ಗೊತ್ತಾಯಿತು. ಹಾಗಾದರೆ ಇದೆಲ್ಲಾ ಆ ವ್ಯಾಘ್ರದತ್ತನ ಆಳವಿನೊಳಗಿನ ಪ್ರದೇಶವೆಂದೇ ಆಯಿತು. ಅವನ ನೆನಪಿನಿಂದ ಸಮರಸೇನನಲ್ಲಿ ಕೋಪ ಉಕ್ಕಿತು. ಕರಕರನೆ ಹಲ್ಲು ಕಡಿದನು. ತನ್ನ ಜತೆಯಲ್ಲಿರುವ ಈ ಸ್ವಲ್ಪ ಮಾತ್ರ ಸೈನಿಕರೊಂದಿಗೆ ತನ್ನಿಂದೇನೂ ಆಗದೆಂದು ಗೊತ್ತಾಗಿ ನಿಟ್ಟುಸಿರಿಟ್ಟನು. ಎಲ್ಲಕ್ಕೂ ಮೊದಲು ಆ ಶಿವದತ್ತನು ಎಲ್ಲಿರುವನೆಂಬುದನ್ನು ತಿಳಿಯುವುದು ಮುಖ್ಯವಾಗಿತ್ತು. ಶಿವದತ್ತನ ಸೂಚನೆಯಂತೆಯೇ ಬಂದುದರಲ್ಲಿ ತಪ್ಪಾಗಿರಬಹುದೇ ಎಂಬ ಅನುಮಾನವೂ ಕುರುಕುರು ಅನ್ನುತ್ತಿತ್ತು.

ಹೀಗೆ ಸಮರಸೇನನು ಆಲೋಚಿಸಿಕೊಂಡಿರುವಾಗ, ಸೈನಿಕನೊಬ್ಬನು ಮರದ ಮೇಲೆ ನೋಡುತ್ತ, "ಅದೇನದು ?" ಎಂದನು ಸಣ್ಣ ದನಿಯಿಂದ. ಅಲ್ಲಿ ಮರದಕೊಂಬೆಯಲ್ಲಿ ಒಂದು ಕಾಗದವು ನೇತಾಡಿಕೊಂಡಿತ್ತು. ಸಮರಸೇನನು ಆಶ್ಚರ್ಯಪಡುತ್ತ ಆ



ಕಾಗದದ ಕಡೆಗೆ ಹಾರಿ ಕಿತ್ತುಕೊಂಡು ಬಿಡಿಸಿ ನೋಡಿದನು. ಅದರಲ್ಲಿ ಹೀಗೆ ಬರೆಯಲ್ಪಟ್ಟಿತ್ತು:

"ಇದು ಅತ್ಯಂತ ಭಯಂಕರವಾದ ಪ್ರದೇಶ. ಬಹು ಬೇಗನೇ ಈ ಪ್ರಾಂತದಿಂದ ಹೊರಟು ಹೋಗಿಬಿಡಿರಿ"

ಇದು ಶಿವದತ್ತನು ಮಾಡಿದ ಎಚ್ಚರಿಕೆಯೇ ಇರಬೇಕೆಂದು ಸಮರಸೇನನು ಊಹಿಸಿದನು. ಆ ಕಾಗದವನ್ನು ಬಹಳ ಗಡಿಬಿಡಿಯಿಂದ ಬರೆದಿರುವಂತೆ ಸಾಲು ತಪ್ಪಿದ ಅಕ್ಷರಗಳನ್ನು ನೋಡಿದರೆ ಗೊತ್ತಾಗುತಿತ್ತು. ಅಂತೂ ಬೇಗನೇ ಅಲ್ಲಿಂದ ಹೋಗಿ ಬಿಡುವುದೇ ಒಳ್ಳೆಯದೆನಿಸಿತು ಸಮರಸೇನನಿಗೆ. ಯಾವ ದಿಕ್ಕಿಗೆ ಹೋಗುವುದೋ? ಬಂದ ದಾರಿಯಿಂದಲೇ ಹಿಂದೆ ಹೋಗುವುದು ಒಳ್ಳೆಯದೆಂದುಕೊಂಡನು. ಆಗ ಒಬ್ಬ ಸೈನಿಕನು ಒಂದು ಗುಹೆಯ ಕಡೆಗೆ ಕೈ ತೋರಿಸುತ್ತ, "ಇಲ್ಲಿ ನೋಡಿರಿ. ಆ ಗುಹೆಯ ಕಡೆಗೆ ಅನೇಕ ಮನುಷ್ಯರು ನಡೆದಿರುವಂತೆ ಹೆಜ್ಜೆಗಳ ಗುರುತುಗಳು ಕಾಣುತ್ತಿವೆ" ಎಂದನು.



ಸಮರಸೇನನು ಅಲ್ಲಿರುವ ಹುಲ್ಲು ಸಸಿಗಳನ್ನೂ ಸಣ್ಣ ಸಣ್ಣ ಕಲ್ಲುಗಳನ್ನೂ ಪರೀಕ್ಷಿಸಿ ನೋಡಿದನು. ಸೈನಿಕನ ಮಾತಿನಲ್ಲಿ ನಿಜವಿರುವುದು ಗೊತ್ತಾಯಿತು. ಒಂದುವೇಳೆ ಶಿವದತ್ತನು ಈ ಮಾರ್ಗದಿಂದಲೇ ಪ್ರಯಾಣಿಸಿರಬಹುದೇ? ಅವನು ಗುರುತಿಸಿದ ದಾರಿಯಿಂದಲೇ ತಾವು ಇಲ್ಲಿಯವರೆಗೆ ಬಂದುದರಿಂದ, ಆ ಗುಹೆಯೊಳಗೆ ಹೋಗುವುದೇ ಸರಿಯೆಂದು ತೋರಿತು.

ಸಮರಸೇನನು ಆ ಗುಹೆಯ ಬಳಿಗೆ ಹೋಗಿ ಬಗ್ಗಿ ಒಳಭಾಗವನ್ನು ನೋಡಿದನು. ಒಳಗೆಲ್ಲಾ ಕರೀಕತ್ತಲೆ. ಸೈನಿಕರಲ್ಲಿ ಒಬ್ಬನು ಕೈದೊಂದಿಯನ್ನು ಬೆಳಗಿಸಿದನು. ಆ ಬೆಳಕಿನಲ್ಲಿ ಸಮರಸೇನನೂ ಸೈನಿಕರೂ ಗುಹೆಯೊಳಗೆ ಹೊಕ್ಕರು.

ಗುಹೆಯೊಳಗೆ ಸ್ವಲ್ಪ ದೂರ ಹೋದ ಮೇಲೆ ಅಲ್ಲಿ ಕಂಡ ದೃಶ್ಯವು ಆಶ್ಚರ್ಯದೊಂದಿಗೆ ಭಯವನ್ನೂ ಹುಟ್ಟಿಸುವಂತಿದ್ದಿತು. ಒಂದು ಕಡೆಯಲ್ಲಿ ಕಲ್ಲಿನಿಂದ ಕಡೆಯಲ್ಪಟ್ಟ ದೊಡ್ಡದೊಂದು ಸಿಂಹಾಸನ. ಆದರೆ ಸುತ್ತಲೂ ಮಾನವಾಕಾರದಲ್ಲಿರುವ ವಿಗ್ರಹಗಳು. ಆ ವಿಗ್ರಹಗಳ ದುಸ್ತು ಮತ್ತು ಆಯುಧಗಳನ್ನು ನೋಡಿದರೆ ಆಟವಿಕರ ವಿಗ್ರಹಗಳಂತಿದ್ದುವು.

"ಇದು ಯಾವನೋ ಹಳೆಯ ಕಾಲದ ಆಟವಿಕ ನಾಯಕನ ಸಮಾಧಿ ಸ್ಥಳವಾಗಿದ್ದೀತು. ಅದೇನಿದ್ದರೂ ಇಂತಹ ಭಯಂಕರ ಕೃತಿಗಳ ಗುಹೆಯನ್ನು ನಾನು ಇದುವರೆಗೂ ನೋಡಲಿಲ್ಲ. ಆಟವಿಕರ ಕ್ರೂರಭಾವದ ವಿಗ್ರಹಗಳನ್ನು ನೋಡುತ್ತಿದ್ದರೆ, ನನಗೆ ಏಕಾಕ್ಷಿ ಮಾಂತ್ರಿಕನನ್ನು ನೋಡಿದ್ದಕ್ಕಿಂತಲೂ ಹೆಚ್ಚು ಭಯಂಕರವೆನಿಸುತ್ತೆ! ಬೇಗ ಇಲ್ಲಿಂದ ಓಡಬೇಕೆನಿಸುತ್ತೆ!" ಎಂದನು ಸಮರಸೇನ.

ಮಾತಿನ ಧಾಟಿಯಲ್ಲಿ ಹಾಗೆ ಹೇಳಿದ ಕೂಡಲೇ ಸಮರಸೇನನು ತುಂಬಾ ನೊಂದುಕೊಂಡನು. ನಾಯಕನಾಗಿರುವವನು ಎಂತಹ ಪರಿಸ್ಥಿತಿಯಲ್ಲಿಯೂ ಭಯಪಡುವುದನ್ನು ಹೊರಗೆಡಹಲೇ ಬಾರದೆಂಬ ಸೂತ್ರವನ್ನು ಥಕ್ಕನೆ ಮರೆತೆನೆಂದು ನೆನಪಾಯಿತು.

ತಮ್ಮ ನಾಯಕನ ಬಾಯಿಂದ ಹೊರಟ ಮಾತನ್ನು ಕೇಳಿದ ಕೂಡಲೇ ಸೈನಿಕರು ವಿಪರೀತವಾದ ಭಯದಿಂದ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ತುಂಬಾ ಹೆದರಿದ ಸೈನಿಕನೊಬ್ಬ ಹಿಂದಿರುಗಿ ಓಡಿಬಿಡಲೂ ಹವಣಿಸಿ ಅರ್ಧ ತಿರುಗಿ ಕೂಡ ನಿಂತನು.

ಈ ಪರಿಸ್ಥಿತಿಯನ್ನು ಗಮನಿಸಿ ಸಮರಸೇನನು "ಏಕೆ ಹೇಳುವೆನೆಂದರೆ ಇಂತಹ ಹಿಂದುಮುಂದು ತಿಳಿಯದ ಸ್ಥಳದಲ್ಲಿ ಬರೀ ಧೈರ್ಯವೊಂದಿದ್ದರೆ ಸಾಲದು. ಕ್ಷಣ ಮಾತ್ರದಲ್ಲಿ ಓಡಲಿಕ್ಕೂ ತಯಾರಾಗಿರುವಷ್ಟು ಭಯವೂ ಎಚ್ಚರಿಕೆಯೂ ಧೈರ್ಯವಂತನಿಗೆ ಬೇಕು. ಇಲ್ಲಿ ನೋಡಿದ್ದು ಸಾಕು. ಮುಂದೆ ಹೋಗೋಣ" ಎಂದು ಗುಹೆಯ ದ್ವಾರದ ಕಡೆಗೆ ಹೊರಟನು. ಈ ಪ್ರದೇಶವನ್ನು ಎಷ್ಟು ಬೇಗನೇ

ಬಿಟ್ಟರೆ ಅಷ್ಟು ಒಳ್ಳೆಯದೆನಿಸಿತು ಅವನಿಗೆ. ಒಟ್ಟಿನ ಮೇಲೆ ಶಿವದತ್ತನೆಂಬವನನ್ನು ಕಂಡು ಹಿಡಿಯುವುದು ಕಷ್ಟವೆಂದೇ ಸಮರಸೇನನಿಗೆ ಅನಿಸುತ್ತಿತ್ತು. ಅವನ ಗೊಡವೆಯನ್ನು ಬಿಟ್ಟು ತಾನು ಹಿಂದಿರುಗಿ, ಹೊರಟಿರುವ ಸ್ಥಳಕ್ಕೇ ಹೋಗೋಣವೆಂದೂ ತೋರಿತು. ಆದರೆ ಅಲ್ಲಿಕೂಡಾ ಪರಿಸ್ಥಿತಿ ತನಗೇನೂ ಅನುಕೂಲವಾಗಿಲ್ಲ. ಒಂದು ಕಡೆ ಏಕಾಕ್ಷಿ ಮಾಂತ್ರಿಕನ ಭಯ. ಇನ್ನೊಂದು ಕಡೆ ದ್ರೋಹಿಯಾದ ಕುಂಭಾಂಡ.

ಹಾಗಿರುವಾಗ ತನ್ನನ್ನು ವ್ಯಾಘ್ರದತ್ತನಿಂದ ಪಾರು ಮಾಡಿಸಿದ ಶಿವದತ್ತನನ್ನು ನೋಡಬೇಕಾದುದೇ ಉತ್ತಮವೆಂದು ತೋರುತ್ತಿತ್ತು. ದೇವಿಯಿಂದ ಪ್ರಸಾದಿತವಾದ ತ್ರಿಶೂಲವು ಎಲ್ಲಿರುವುದೆಂದು ಶಿವದತ್ತನಿಗೆ ಗೊತ್ತಿರಲೇಬೇಕು. ಏಕಾಕ್ಷಿಗೂ, ಚತುರ್ನೇತ್ರನಿಗೂ ಗುರುವಾದ ಮಹಾ ಶಾಕ್ತೇಯನ ಆ ತ್ರಿಶೂಲಕ್ಕೆ ಅಪ್ರತಿಮವಾದ ಅಮಾನುಷ ಶಕ್ತಿ ಇದ್ದೇ ತೀರಬೇಕು !

ಆ ಶಿವದತ್ತನು ಒಳ್ಳೆಯವನೆಂದು ನಂಬುವುದು ಹೇಗೆ ? ಅವನು ಇನ್ನೊಂದು ಬಗೆಯಲ್ಲಿ ತನಗೆ ಶತ್ರುವೋ ಏನೋ ! ನಿಜವಾದ ಮಿತ್ರನೋ, ಮಿತ್ರನಂತೆ ನಟಿಸುವ ಶತ್ರುವೋ ? ನಾವೆಯೊಳಗಿನ ಧನರಾಶಿ. ಅದನ್ನು ಕಾಪಾಡುವ ನಾಗಕನ್ಯೆ; ಈ ವಿಷಯ ಇವರೆಲ್ಲರಿಗೂ ಗೊತ್ತಿದೆ. ಏಕಾಕ್ಷಿ, ಚತುರ್ನೇತ್ರರೆಂಬ ಮಾಂತ್ರಿಕರು ಮಾತ್ರವಲ್ಲದೆ, ಅವುಗಳಿಗಾಗಿ ವ್ಯಾಘ್ರದತ್ತನೂ, ಶಿವದತ್ತನೂ ಪ್ರಯತ್ನಿಸುತ್ತಿದ್ದಾರೆ. ಇವರೆಲ್ಲರ ಹೊಡೆದಾಟಗಳ ನಡುವೆ ತಾನು ಸಿಕ್ಕಿಬಿದ್ದಂತಾಗಿದೆಯೆಂದು ಸಮರಸೇನನಿಗೆ ತೋರಿತು,

ಹೀಗೆ ಯೋಚನೆಯ ತಾಕಲಾಟದಲ್ಲಿ ನಡೆಯುತ್ತಾ ಸಮರಸೇನನು ಆ ಗುಹೆಯೊಳಗಿನಿಂದ ಹೊರಗೆ ಬಂದನು. ಇನ್ನು ಯಾವ ಕಡೆಗೆ ದಾರಿತೆಗೆಯುವುದೆಂಬ ನಿರ್ಣಯಕ್ಕೆ ಬರುವುದರೊಳಗೆ, ಒಮ್ಮೆಗೇ ದೊಡ್ಡದೊಂದು ಕಲಕಲರವವೂ, ಅವುಗಳನ್ನು ಅನುಸರಿಸಿ, ಬಾಣಗಳೂ, ಈಟಿಗಳೂ, ಭಲ್ಲೆಗಳೂ ಅವರ ಮೇಲೆ ಬೀಳತೊಡಗಿದುವು.

"ಶತ್ರುಗಳು ! ಬಗ್ಗಿಕೊಳ್ಳಿರಿ! ಕಲ್ಲುಗಳೆಡೆಯಲ್ಲಿ ಅಡಗಿಕೊಳ್ಳಿರಿ! ಓಡಿರಿ!" ಎಂದು ಸಮರಸೇನನು ಸೈನಿಕರಿಗೆ ಎಚ್ಚರಿಸಿ, ತಾನೂ ಕಲ್ಲು ಗುಂಪುಗಳ ಹಿಂದಿನ ಭಾಗಕ್ಕೆ ಓಡಿದನು.

ದೂರದಲ್ಲಿ ಬೆಟ್ಟದ ಕಲ್ಲುಗಳ ಮೇಲೆ ನಿಂತುಕೊಂಡು, ಕೆಲಮಂದಿ ಸೈನಿಕರು ಸಮರಸೇನನಿಗೆ ಕಂಡುಬಂದರು. ಅವರು ಯಾರು ? ವ್ಯಾಘ್ರದತ್ತನ ಕಡೆಯವರೋ, ಕುಂಭಾಂಡನ ಕಡೆಯ ಆಟವಿಕರೋ ?

—(ಇನ್ನೂ ಇದೆ)






## ೧೫

[ ಶಿವದತ್ತನನ್ನು ಹುಡುಕುತ್ತಾ ಹೊರಟ ಸಮರಸೇನನು, ಒಂದು ಮಡುವಿನಲ್ಲಿ ಮೊಸಳೆಯ ಬಾಯಿಗೆ ಬೀಳಲಿರುವವರನ್ನು ಕಾಪಾಡಿದನು. ಅವರು ಅವನ ಜತೆಗಾರರೆಂದೂ ತಿಳಿಯಿತು. ಅವರ ಮೂಲಕ ವ್ಯಾಘ್ರದತ್ತನು ಹೋದ ದಿಕ್ಕು ತಿಳಿದು, ಆ ಕಡೆಗೆ ಹೋದಾಗ, ಒಂದು ಎಚ್ಚರಿಕೆಯ ಪತ್ರವು ಸಿಕ್ಕಿತು. ಆಗಲೇ ಗುಡ್ಡದ ಮೇಲಿನಿಂದ ಅವರ ಕಡೆಗೆ ಬಾಣಗಳು ಹಾರ ತೊಡಗಿದುವು ]

ತಮ್ಮ ಸುಳಿವು ಹಿಡಿದು ಬಾಣಗಳನ್ನು ಪ್ರಯೋಗಿಸುವವರು ಯಾರೆಂದು ಯೋಚನೆ ಮಾಡುತ್ತಾ ಸಮರಸೇನನು ಬಗ್ಗಿ, ಕೂತು, ಕುಪ್ಪಳಿಸಿ ತಪ್ಪಿಸಿಕೊಂಡು ಹೋಗುವಾಗ, ಅವರು ಯಾರೆಂಬುದೂ ಬೇಗನೇ ಗೊತ್ತಾಯಿತು. "ವ್ಯಾಘ್ರದತ್ತರಿಗೆ ಜೈ ! ವ್ಯಾಘ್ರಮಂಡಲಕ್ಕೆ ಜೈ !" ಎಂದು ಅವರು ಉಚ್ಚಕಂಠದಿಂದ ಆಗಾಗ ಬೊಬ್ಬಿಡುತ್ತಿದ್ದರು. ಅವರ ಉಚ್ಚ ಕಂಠಗಳ ಬೊಬ್ಬೆಗಳಿಗೆ ಗುಡ್ಡಗಳೂ ಗುಹೆಗಳೂ ಪ್ರತಿಧ್ವನಿ ಕೊಡುತ್ತಿದ್ದುವು.

ವ್ಯಾಘ್ರದತ್ತನ ಭಟರು ಗುಡ್ಡದ ಕಲ್ಲುಗಳ ಹಿಂದೆ ಅಡಗಿಕೊಂಡು ಸಮರಸೇನ ಮತ್ತು ಅವನ ಅನುಚರರ ಮೇಲೆ ಬಾಣಗಳನ್ನು ಹಾರಿಸುತ್ತಿದ್ದರು. ಅವರು ಸಮರಸೇನನ ಗುರುತು ಹಿಡಿದೇ ಬಾಣ ಪ್ರಯೋಗ ಮಾಡುವರೋ, ಶಿವದತ್ತನ ಕಡೆಯವರೆಂದುಕೊಂಡಿರುವರೋ ಗೊತ್ತಾಗಲಿಲ್ಲ. ಹಾಗೆ ಬಾಣ ಪ್ರಯೋಗ ಮಾಡುತ್ತಾ ಮುಂದುವರಿಯುವ ಅವರಿಂದ ಜೀವದೊಂದಿಗೆ ತಪ್ಪಿಸಿಕೊಳ್ಳಬೇಕಾದರೆ ಒಂದೇ ಒಂದು ಮಾರ್ಗವಷ್ಟೇ ಸಮರಸೇನನಿಗೆ ಕಂಡಿತು. ಬಂಡೆಗಳ ಮರೆಯಲ್ಲಿ ,ಅಡಗಿ ಕುಪ್ಪಳಿಸಿ



ಕೊಂಡೇ ತಪ್ಪಿಸಿಕೊಳ್ಳಬೇಕು. ತಾನು ಒಬ್ಬನಾದರೆ ಹೇಗಾದರೂ ತಪ್ಪಿಸಿಕೊಳ್ಳಬಹುದು. ಅನುಚರರು ಇರುವುದರಿಂದ, ಸಿಕ್ಕಿ ಬೀಳುವ ಹಾಗಾಗದಂತೆ, ಅವರನ್ನೂ ಸನ್ನೆಗಳಿಂದ ಎಚ್ಚರಿಸಬೇಕಾಗಿತ್ತು.

ಸಮರಸೇನನು ಮಾಡುವ ಹಾಗೆಯೇ ಅವನೊಂದಿಗಿದ್ದ ಅನುಚರರೂ ನಿಶ್ಶಬ್ದವಾಗಿ ಕಲ್ಲುಗಳ ಹಿಂದೆ ಅಡಗಿಕೊಂಡೇ ಇದಿರಿನಲ್ಲಿರುವ ಸುರಂಗದ ಗುಹೆಯ ಕಡೆಗೆ ಹೋದರು. ಆ ಸುರಂಗವು ಎಲ್ಲಿಗೆ ಒಯ್ಯುವುದೋ ಅದರಾಚೆಗೆ ಏನಿದೆಯೋ ಎಂಬ ಸಂದೇಹಗಳೊಂದೂ ಅವರ ಮುಂದೆ ಸುಳಿಯಲಿಲ್ಲ. ಹಾಗೆ ಸುಳಿದರೂ ಬೇರೆ ದಾರಿ ಇಲ್ಲದ್ದರಿಂದ ದೇವರೇ ಗತಿ ಎಂದುಕೊಂಡು ಹೋಗಬೇಕಾಗಿತ್ತು. ಮೊದಲು ಈ ವ್ಯಾಘ್ರದತ್ತನ ಕಡೆಯುವರಿಂದ ತಪ್ಪಿಸಿಕೊಳ್ಳುವುದೇ ಅವರ ಗುರಿ.

ಕಡೆಗೆ ಅವರೆಲ್ಲರೂ ಒಂದು ಕತ್ತಲೆಯ ಗುಹೆಯೊಳಗೆ ನುಗ್ಗಿದರು. ಅಲ್ಲಿ ಹುದುಗಿ ಸ್ವಲ್ಪ ಹೊತ್ತು ಕಿವಿಗೊಟ್ಟು ಕೇಳುತ್ತಿರಲು ವ್ಯಾಘ್ರದತ್ತನ ಭಟರ ಕೂಗುಗಳು ಕ್ರಮವಾಗಿ ತಗ್ಗುತ್ತಾ ಹೋದುವು. ಅವರು ಏನನ್ನೋ ಹುಡುಕುತ್ತಾ ಬೇರೆ ದಿಕ್ಕಿಗೆ ತಿರುಗಿದರೆಂದು ಸಮರಸೇನನಿಗೆ ಗೊತ್ತಾಯಿತು. ಸದ್ಯ ದೇವರು ಕಾಪಾಡಿದನೆಂದು ಎಲ್ಲರೂ ಬಲವಾಗಿ ಉಸಿರುಬಿಟ್ಟರು.

ಆಗ ಹೊತ್ತು ಮೇಲೇರಿ ನಡುಮಧ್ಯಾಹ್ನವಾಗಿದ್ದರೂ ಕತ್ತಲೆಯ ಗುಹೆಯೊಳಗೆ ಅದೊಂದೂ ತಿಳಿಯಲಿಲ್ಲ. ಅವರೆಲ್ಲ ತಡವುತ್ತಾ ಮುಂದೆ ಮುಂದೆ ಹೋಗುತ್ತಿರಲು, ಗುಹೆಯ ಎರಡನೆಯ ತುದಿಯಿಂದ ಸಣ್ಣಗಿನ ಸೂರ್ಯಕಾಂತಿ ಕಾಣಿಸಿತು. ಅದು ಗುಹೆಯ ಎರಡನೇ ದ್ವಾರವೆಂದು ಅಂದುಕೊಳ್ಳುತ್ತ, ಮತ್ತಿಷ್ಟು ಮುಂದೆ ನಡೆದು ಗುಹೆಯ ಆಚೆಯ ಬದಿಯಲ್ಲಿ ಹೊರಗೆಬಂದರು.

ಅಲ್ಲಿ ಕಣ್ಣಿಗೆಬಿದ್ದ ದೃಶ್ಯವು ಅತ್ಯದ್ಭುತವಾಗಿತ್ತು. ಶಿವದತ್ತನು ಚಿತ್ರಪಟದಲ್ಲಿ ಗುರುತಿಸಿದ ಶಿಥಿಲಗಳು ಅವರ ಇದಿರಿನಲ್ಲಿ ಪ್ರತ್ಯಕ್ಷವಾಗಿದ್ದುವು. ಯಾವುದೋ ಒಂದು ಮಹಾನಗರವೇ, ಭೂಕಂಪದಿಂದ ಸರ್ವನಾಶ ಹೊಂದಿದ ಹಾಗೆ, ದೊಡ್ಡ ದೊಡ್ಡ ಭವನಗಳ ಗೋಡೆಗಳು ಒಡೆದು ಮುಗುಚಿಕೊಂಡಿದ್ದುವು. ಕೆಲವು ವಾಲಿಕೊಂಡಿದ್ದುವು. ಕೆಲವು ಕಂಬಗಳು ಬಾಗಿಕೊಂಡು ಸೀಳುಬಿಟ್ಟು ಯಾವ ಕ್ಷಣದಲ್ಲಿಯೂ ನೆಲಕ್ಕೊರಗುವ ಹಾಗೆ ಕಾಣುತ್ತಿದ್ದುವು. ಅಂಥವುಗಳ ನಡುವೆ ತಿರುಗಾಡುವುದೂ ಅಪಾಯವೇ !

ಇದು ಶಿವದತ್ತನು ಚಿತ್ರದಲ್ಲಿ ಗುರುತಿಸಿರುವ ಶಿಥಿಲ ನಗರವೆನ್ನಲು ಸಂದೇಹವಿರಲಿಲ್ಲ. ಹಾಗಾದರೆ ಶಿವದತ್ತನು ಇಲ್ಲೇ ಎಲ್ಲೋ ಅಡಗಿಕೊಂಡಿರಬೇಕು. ತಾನು ತಪ್ಪು ತಪ್ಪಾಗಿ ನಡೆದು ಬಂದರೂ ದಿಕ್ಕು ತಪ್ಪಲಿಲ್ಲವೆಂದಾಯಿತು. ಇದೊಂದು ಕುಂಡಲಿನೀ ದೇವಿಯ ಕೃಪೆಯೇ ಸರಿ. ಆದುದರಿಂದ ಈಗ ಧೈರ್ಯಮಾಡಿ ಮುಂದುವರಿದು ಅವನನ್ನು

ಹುಡುಕಬೇಕೆಂದು ಸಮರಸೇನನು ನಿಶ್ಚಯಿಸಿದನು. ಅವನೊಂದಿಗಿದ್ದ ಸೈನಿಕರಿಗಂತೂ ಯಾವುದೋ ಸ್ವಪ್ನ ಲೋಕಕ್ಕೆ ಬಂದವರಂತಾಗಿ, ಮೈಮರೆತು ನಿಂತಿದ್ದರು.

"ಮುಂದೆ ನಡೆಯಿರಿ" ಎಂದು ಸಮರಸೇನನು ಹೇಳುವಷ್ಟರಲ್ಲಿ ಆ ಪ್ರದೇಶವಲ್ಲಾ ದೊಡ್ಡದೊಂದು ಶಂಖನಾದದಿಂದ ತುಂಬಿಹೋಯಿತು. ಸಮರಸೇನಾದಿಗಳು ನಿಂತಲ್ಲೇ ತಟಸ್ಥರಾದರು. ಶಂಖನಾದವನ್ನನುಸರಿಸಿ ಕೂಗುಗಳೂ, ಘೋಷಣಾಧ್ವನಿಯೂ ಹೊರಟುವು. ಸುಮಾರು ಐವತ್ತು ಅರವತ್ತು ಮಂದಿ ಭಟರೊಂದಿಗೆ, ವ್ಯಾಘ್ರದತ್ತನು ಆ ಶಿಥಿಲ ಭವನಗಳ ಕಡೆಗೇ ಬರುತ್ತಿದ್ದನು. ಅವರ ರೀತಿಯಲ್ಲಿ ಗೆಲುವಿನ ಭಾವವಿದ್ದಿತು. ಅವರು ಯಾವುದೋ ಇನ್ನೊಂದು ಗುಹೆಯೊಳಗಿನಿಂದ ಅಲ್ಲಿಗೆ ಬಂದಿರಬೇಕು. ಅಂತಹ ಗುಪ್ತ ಸುರಂಗ ಮಾರ್ಗಗಳು ಇನ್ನೂ ಬೇರೆ ಇವೆಯೋ ಏನೋ? ಅಂತಹುದೊಂದರಲ್ಲಿ ಶಿವದತ್ತನು ಅಡಗಿರಲೂಬಹುದು!

ಸಮರಸೇನನು ತನ್ನ ಸೈನಿಕರಿಗೆ ಎಚ್ಚರಿಕೆಯನ್ನು ಸೂಚಿಸಿ, ವ್ಯಾಘ್ರದತ್ತಾದಿಗಳು ಯಾವ ಕಡೆಗೆ ಹೋಗುವರೆಂಬುದನ್ನು ಗಮನಿಸಿದನು. ಅವರಾರಿಗೂ ಸಮರಸೇನನ ಗೊಡವೆಯೇ ಇದ್ದಂತೆ ಕಾಣಲಿಲ್ಲ. ದೊಡ್ಡ ವಿಜಯದ ನಡಿಗೆಯಾಗಿತ್ತು ಅವರದು.

ವಾಘ್ರದತ್ತನು ತಾನು ಸಾಧಿಸಬೇಕಾದ ಮಹಾ ಕಾರ್ಯವನ್ನು ಸಾಧಿಸಿಕೊಂಡವನ ಹಾಗೆ ಭಟರ ಮುಂದಿನಿಂದ ಧೀರತನದಿಂದ ನಡೆಯುತ್ತಿದ್ದನು. ಭಟರು ನಗುತ್ತ ಕೆಲೆಯುತ್ತ, ಉತ್ಸಾಹದಿಂದ ಕೂಗುತ್ತ ಕೆಲವರು ಕುಣಿಯುತ್ತ ಹಾಡುತ್ತ, ಕೈತಟ್ಟುತ್ತ, ಕುಪ್ಪಳಿಸುತ್ತ ಸಾಗುತ್ತಿದ್ದರು.

ಶಿವದತ್ತನು ಎಲ್ಲಿ ಅಡಗಿರುವನೆಂಬುದನ್ನು ತಿಳಿದು ವ್ಯಾಘ್ರದತ್ತನು ಅವನನ್ನು ಬಂದಿಯಾಗಿ ಹಿಡಿದನೇನೋ ಎಂಬ ಸಂದೇಹವೆದ್ದಿತು ಸಮರಸೇನನಿಗೆ. ಆದರೆ ಆ ಭಟರ ನಡುವೆ ಬಂದಿಯಾದವನಾವನೂ ಕಾಣಲಿಲ್ಲ. "ಹಾಗಾದರೆ ಬಹುಶಃ ಶಾಕ್ತೇಯನ ಮಹಾಶಕ್ತಿಯ ತ್ರಿಶೂಲವು ಎಲ್ಲಿರು






ವುದೆಂದು ವ್ಯಾಘ್ರದತ್ತನಿಗೆ ಗೊತ್ತಾಗಿರಬೇಕು. ಅದಕ್ಕೇ ಇಷ್ಟು ಆನಂದ!" ಎಂದುಕೊಂಡನು ಸಮರಸೇನ.

ವ್ಯಾಘ್ರದತ್ತನು ಆ ಶಿಥಿಲ ನಗರ ಪ್ರದೇಶದಲ್ಲಿ ಯಾವುದೋ ಒಂದು ಸ್ಥಳವನ್ನು ಗುರುತಿಸಿದಂತೆ, ತನ್ನ ಅನುಚರರಿಗೇನೋ ವಿವರಿಸುತ್ತ, ಹೀಗೆ ಹಾಗೆ ಎಂದು ಬೆರಳಿನಿಂದ ಸೂಚಿಸುತ್ತ, ಕರೆದೊಯ್ಯುತ್ತಿದ್ದನು.

ಅದನ್ನು ನೋಡಲೇಬೇಕೆಂದುಕೊಂಡು ಸಮರ ಸೇನನು ಶಿಥಿಲ ಭಾಗಗಳ ಕಲ್ಲುಗುಪ್ಪೆಗಳ ಹಿಂದೆ ಅಡಗಿಕೊಂಡೇ ತನ್ನ ಸೈನಿಕರೊಂದಿಗೆ ಹೋಗಿ ಹೋಗಿ ದೊಡ್ಡದೊಂದು ಭವನದ ಪ್ರಾಂಗಣವನ್ನು ತಲಪಿದನು. ಅಲ್ಲಿ ವಾಲಿಕೊಂಡಿದ್ದ ಒಂದು ಒಡೆದ ಕಂಬದ ಮರೆಯಲ್ಲಿ ಇದ್ದು ವ್ಯಾಘ್ರದತ್ತನ ಕಡೆಗೆ ನೋಡತೊಡಗಿದನು.

ಮುಂದೆ ನಡೆಯುತ್ತಿದ್ದ ವ್ಯಾಘ್ರದತ್ತನು, ತಟ್ಟನೆ ಒಂದು ಕಡೆಯಲ್ಲಿ ನಿಂತು, "ನನ್ನ ಪ್ರಿಯ ವ್ಯಾಘ್ರ ಯೋಧರೇ! ನಮ್ಮ ಶ್ರಮವು ಫಲಿಸುವ ಸಮಯ ಹತ್ತಿರವಾಯಿತು. ನಿಮ್ಮಲ್ಲಿ ಪ್ರತಿಯೊಬ್ಬನನ್ನೂ ಒಂದೊಂದು ದೇಶಕ್ಕೆ ರಾಜನನ್ನಾಗಿ ಮಾಡುತ್ತೇನೆಂದು ನಾನು ಮಾತುಕೊಟ್ಟಿದ್ದೇನಷ್ಟೆ? ಆ ವಾಗ್ದಾನವನ್ನು ನಡೆಸುವ ವೇಳೆ ಸಮೀಪಿಸುತ್ತಾ ಇದೆ. ಈಗ ನಿಮಗೊಂದು ಮುಖ್ಯ ವಿಷಯ ಹೇಳಬೇಕಾಗಿದೆ. ನೀವು ಈ ನಿಮಿಷದಲ್ಲಿ ಒಂದು ಸಾಹಸ ಕಾರ್ಯವನ್ನು ಮಾಡಬೇಕಾಗಿದೆ. ಮಾಡುವಿರೆಂಬ ನಂಬಿಕೆ ನನಗಿದೆ. ಮಾಡುವಿರಷ್ಟೆ?" ಎಂದನು ಗಂಭೀರವಾಗಿ.

"ಓ! ನಾವು ಎಂತಹ ಸಾಹಸ ಮಾಡಬೇಕಾದರೂ ತಯಾರು! ನಿಮ್ಮ ಬಾಯಿಯಿಂದ ಏನು ಬಂದರೂ ನಾವು ತಯಾರು! ಅದೇನೆಂದು ಅಪ್ಪಣೆ ಮಾಡಿರಿ!" ಎಂದು ಭಟರು ಕೂಗಿ ಹೇಳಿದರು.

ವ್ಯಾಘ್ರದತ್ತನು ಮಂದಹಾಸ ಬೀರುತ್ತ, "ಸ್ವಾಮಿ ಭಕ್ತರೆಂದರೆ ನೀವೇ ಸರಿ! ನಿಮ್ಮ ಬಯಕೆಗಳು ಇನ್ನು ಸ್ವಲ್ಪ ಹೊತ್ತಿನಲ್ಲೇ ನೆರವೇರುತ್ತವೆ. ಅದೋ, ಅಲ್ಲಿ ಇದಿರಿನಲ್ಲಿ ಕಾಣುವ ಭವನವನ್ನು ನೋಡಿರಿ. ಅದರ ಸಿಂಹದ್ವಾರವು ಮುರಿದು ಕಲ್ಲುಗಳಿಂದ ಮುಚ್ಚಿಹೋಗಿದೆ. ನೀವು ಅಲ್ಲಿ ಅಡ್ಡವಾಗಿರುವ ಕಲ್ಲುಗಳನ್ನೂ, ಮುರಿದ ಕಂಬಗಳನ್ನೂ ತೊಲಗಿಸಿ ದಾರಿಯನ್ನು ಸರಿಮಾಡಿರಿ. ನಾವು ಶೋಧಿಸಿ ತೆಗೆಯಬೇಕಾದ ಅಮೂಲ್ಯವಾದ ಆ ವಸ್ತು ಆ ಭವನದಲ್ಲೇ ಇದೆ. ಅದೊಂದು ಸಿಕ್ಕಿಬಿಟ್ಟರೆ ನೀವು ಒಬ್ಬೊಬ್ಬರೂ ಒಂದೊಂದು ದೇಶದ ರಾಜರೇ" ಎಂದನು.

ವ್ಯಾಘ್ರದತ್ತನು ಹೀಗೆ ಹೇಳಿದ ಕೂಡಲೇ ಭಟರಿಗೆ ಎಲ್ಲಿಲ್ಲದ ಉತ್ಸಾಹವೆದ್ದಿತು. ಅವರು ಚಿತ್ರ ವಿಚಿತ್ರವಾದ ಧ್ವನಿಯನ್ನೂ, ರಾಗಗಳನ್ನೂ ಎಬ್ಬಿಸಿ, ಒಬ್ಬರನ್ನೊಬ್ಬರು ಎಚ್ಚರಿಸುತ್ತ, ಹುರುಡಿಸುತ್ತ, ದಿಮ್ಮಿ, ಪಿಕಾಸಿ, ಗುದ್ದಲಿಗಳನ್ನು ಪ್ರಯೋಗಿಸುತ್ತ ದೊಡ್ಡ ದೊಡ್ಡ ಬಂಡೆಗಳನ್ನು ಆಚೆಗೆ ಉರುಳಿಸುತ್ತ ಕೆಲಸಕ್ಕೆ ತೊಡಗಿದರು.




ಆ ಭಟರು ದುರಾಶೆಯ ಉತ್ಸಾಹಾವೇಶದಲ್ಲಿ ಮುಳುಗಿ, ಬರಲಿರುವ ಅಪಾಯವನ್ನು ತಿಳಿಯದಾದರು. ಶಿಥಿಲವಾಗಿ ಬೀಳುತ್ತಲಿದ್ದ ಆ ಭವನದ ಗೋಡೆಗಳೂ ಸ್ತಂಭಗಳೂ ಕೆಳಗಿನ ರಾಶಿಗಳ ಆಧಾರ ತಪ್ಪಿದ ಕೂಡಲೇ ಯಾವ ಕ್ಷಣಕ್ಕೂ ಬೀಳುವುದು ಖಂಡಿತವೆಂದು ಸಮರಸೇನನಿಗೆ ತಿಳಿಯಿತು. ಆದರೆ ಬುಡದಲ್ಲಿ ಎಷ್ಟು ಜನರು ಹತರಾಗುವರೋ ಎಂದು ನಿರೀಕ್ಷಿಸ ತೊಡಗಿದನು.

ವ್ಯಾಘ್ರದತ್ತನಿಗೂ ಅದು ಗೊತ್ತಿರಬೇಕು. ಅವನು ದೂರದೂರವೇ ನಿಂತು ಕಲ್ಲುಗಳನ್ನು ಎಬ್ಬಿಸಿ ದೂರಮಾಡುವ ಭಟರಿಗೆ ಇನ್ನಿಷ್ಟು ಉತ್ಸಾಹಪಡಿಸುತ್ತಿದ್ದನು. ಅವನು ತಲೆತಿರುಗಿಸಿ ಆಚೆಗೂ ಈಚೆಗೂ ಪರಿಕಿಸುವುದನ್ನು ನೋಡಿ, ಆ ದುಷ್ಟನು ಬೇಕೆಂತಲೇ ಅವನ ಭಟರನ್ನೇ ಬಲಿಗೊಡುವ ಕೆಲಸ ಮಾಡುವನೆಂದು ಗೊತ್ತಾಗುತ್ತಿತ್ತು. ವ್ಯಾಘ್ರದತ್ತನ ಆಜ್ಞೆಯನ್ನು ಅತ್ಯಂತ ವಿಶ್ವಾಸದಿಂದ ಭಟರು ಪಾಲಿಸುತ್ತಿದ್ದಾರೆ. ಯಾವ ಗೋಡೆಯೋ ಕಂಬವೋ ಬೀಳಲಿದೆ. ಈ ವ್ಯಾಘ್ರದತ್ತನು ಎಂತಹ ಘಾತುಕನೋ! ಪಾಪದ ಭಟರಿಗೆ ಅದು ತಿಳಿಯುವುದಿಲ್ಲವಲ್ಲಾ!

ವ್ಯಾಘ್ರದತ್ತನು ನರಬಲಿಗಾಗಿಯೇ ಈ ಭಟರನ್ನು ಕರೆದುಕೊಂಡು ಬಂದ ಹಾಗಿದೆ. ಸಮರಸೇನನಿಗೆ ಆ ದುರ್ಭಾಗ್ಯದ ಭಟರ ಮೇಲೆ ಕರುಣೆಯುಂಟಾದರೂ ಅವನೇನೂ ಮಾಡುವಂತಿಲ್ಲ. ನೋಡುತ್ತಿದ್ದಂತೆ ಸಿಡಿಲ್ದನಿಯೊಂದಿಗೆ ಆ ಭವನವು ಒಮ್ಮೆಗೇ ಕುಸಿದುಬಿತ್ತು. ಅದರಡಿಯಲ್ಲಿ ಸಿಕ್ಕಿ ವ್ಯಾಘ್ರದತ್ತನ ಭಟರಲ್ಲಿ ಅನೇಕರು ಹಾಹಾಕಾರ ಮಾಡುತ್ತಾ ಸತ್ತುಹೋದರು. ಕೆಲವರು ಮಾತ್ರ ಬಲವಾದ ಗಾಯಗಳಿಂದ ಪ್ರಾಣ ಉಳಿಸಿಕೊಂಡು ಏಳುತ್ತಾ ಆರ್ತನಾದ ಮಾಡಿದರು. ಕೆಲವರು ಅರೆಜೀವಿಗಳಾಗಿ ಏಳಲಾಗದೆ ಎಡೆಯಲ್ಲಿ ಸಿಕ್ಕಿಕೊಂಡರು.

ಈ ಭಯಂಕರ ಘಟನೆ ಕಣ್ಣುಮುಚ್ಚಿ ಬಿಡಿಸುವುದರೊಳಗೇ ನಡೆದುಬಿಟ್ಟಿತು. ಪ್ರಾಣದೊಂದಿಗೆ ಉಳಿದವರನ್ನು ಕರೆದುಕೊಂಡು ವ್ಯಾಘ್ರದತ್ತನು ಸ್ವಲ್ಪದೂರ ಹೋಗಿ ನಿಂತನು. ತನ್ನನ್ನು ನಂಬಿದ ಅನೇಕ ಭಟರು ದುರ್ಮರಣ ಹೊಂದಿದುದನ್ನು ನೋಡಿ, ವ್ಯಾಘ್ರಧತ್ತನಿಗೆ ಇರುವ ಕಚ್ಚಿದ ಹಾಗೂ ಆಗಲಿಲ್ಲ. ಅರೆ ಸತ್ತವರ ಗೊಡವೆಗೂ ಹೋಗಲಿಲ್ಲ.

ಉಳಿದ ಭಟರಿಗೆ ಸಮಾಧಾನ ಆಗುವ ಹಾಗೆ ವ್ಯಾಘ್ರದತ್ತನು "ಈಗ ಬದುಕಿದವರೆಲ್ಲಾ ಪುಣ್ಯವಂತರು. ಈಗ ನಡೆದುದು ಆ ಪರೀಕ್ಷೆಯೇ! ಭಾಗ್ಯ ಸಿಕ್ಕಿದರೂ ಅನುಭವಿಸುವ ಯೋಗ್ಯತೆ ಇಲ್ಲದವರೇ ಸತ್ತರು. ನೀವೇ ನಿಜವಾದ ಅದೃಷ್ಟಶಾಲಿಗಳು! ಪುಣ್ಯವಂತರು. ಸತ್ತವರಿಂದ ವ್ಯಾಘ್ರೇಶ್ವರೀ ದೇವಿಗೆ ಏನೋ ಅಪಚಾರವಾಗಿದೆ. ಇನ್ನು ನಮಗೆ ಯಾವ ಭಯವೂ ಇಲ್ಲ. ಧೈರ್ಯವಾಗಿರಿ!" ಎಂದು




ವ್ಯಾಘ್ರದತ್ತನು, ತನ್ನ ಕೈಯಲ್ಲಿದ್ದ ಒಂದು ಪಟವನ್ನು ಅವರಿಗೆ ತೋರಿಸಿ, "ಅದ್ಭುತವಾದ ಶಕ್ತಿ ಮಹಿಮೆಗಳಿರುವ ಶಾಕ್ತೇಯನ ತ್ರಿಶೂಲವಿರುವ ಸ್ಥಳವನ್ನು ಈಗ ನಿಮಗೆಲ್ಲರಿಗೂ ಹೇಳುತ್ತೇನೆ. ಅದರ ಪ್ರಭಾವದಿಂದ ಈಗ ಉಳಿದಿರುವ ನಾವು ಮಾತ್ರ ಈ ಪ್ರಪಂಚಕ್ಕೇ ಚಕ್ರವರ್ತಿಗಳಾಗಬಹುದು. ಆ ತ್ರಿಶೂಲವಿರುವ ಜಾಗ ಈ ಪಟದಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ಈ ಸಿಂಹದ್ವಾರದಲ್ಲಿ ಪ್ರವೇಶಿಸಿ ಹೋದರೆ ಆನೆಗಳ ವನ ಬರುತ್ತದೆ. ಆನೆಗಳ ವನದಲ್ಲಿ, ವಿಷ ವೃಕ್ಷಕ್ಕೆ ನೂರು ಗಜಗಳಷ್ಟು ದೂರ ಮೃತವೀರರ ಸಮಾಧಿಯ ಕೆಳಗೆ ಗುರುದ್ರೋಹಿಯ ಅಸ್ಥಿಪಂಜರದೊಳಗೆ ಶಾಕ್ತೇಯನ ತ್ರಿಶೂಲವನ್ನು ಅಡಗಿಸಿಡಲ್ಪಟ್ಟಿದೆ ! ಅದು ಈ ಚಿತ್ರಪಟದಲ್ಲಿ ಸ್ಪಷ್ಟವಾಗಿದೆ ನೋಡಿದಿರಾ ? ಇನ್ನು ನಮಗೆ ಯಾರೂ ಇದಿರಿಲ್ಲ" ಎಂದನು.

ಮರೆಯಲ್ಲಿದ್ದು ಆ ಮಾತುಗಳನ್ನು ಕೇಳಿ ಸಮರಸೇನನಿಗೆ ಆಶ್ಚರ್ಯದಿಂದಲೂ, ಭಯದಿಂದಲೂ ರೋಮಾಂಚನವಾಯಿತು. ಯಾವ ಮಹಾಶಕ್ತಿಯ ತ್ರಿಶೂಲಕ್ಕಾಗಿ ಆ ಮಂತ್ರ ದ್ವೀಪದಲ್ಲಿ ಇಷ್ಟೊಂದು ಕೊಲೆಗಳೂ, ಯುದ್ಧಗಳೂ, ಅತ್ಯಾಚಾರಗಳೂ ನಡೆಯುತ್ತಿವೆಯೋ ಆ ತ್ರಿಶೂಲವು ಕಡೆಗೆ ವ್ಯಾಘ್ರದತ್ತನಂತಹ ಪರಮ ನೀಚನಿಗೆ ಲಭ್ಯವಾಗಲಿದೆ ! ಹಾಗಾಗಲೇಬಾರದು !

ಇದನ್ನು ನೋಡುತ್ತಾ ನಿಂತಿರುವ ತಾನು ಏನು ಮಾಡಬೇಕು ? ಹೇಗೆ ತಡೆಯಬೇಕು ? ಆ ಶಿವದತ್ತನು ಏನಾದನು ? ಅವನಿಗೆ ತ್ರಿಶೂಲವು ಎಲ್ಲಿರುವುದೆಂದು ಗೊತ್ತೋ ? ಒಂದು ವೇಳೆ ಅವನೂ ತನ್ನ ಹಾಗೆ ಇಲ್ಲೆಲ್ಲಾದರೂ ಹೊಂಚಿಕೊಂಡಿರುವನೆ ? ತಾನು ಕೇವಲ ಆರು ಮಂದಿ ಸೈನಿಕರೊಂದಿಗೆ ವ್ಯಾಘ್ರದತ್ತನನ್ನು ಇದಿರಿಸುವುದು ಕ್ಷೇಮವಾದೀತೆ? ಘಾತವಾದೀತೇ? ಈ ಸಂದರ್ಭವನ್ನು ಸರಿಗೊಳಿಸಬೇಕಾದವಳು ಕುಂಡಲಿನೀದೇವಿಯೇ ಸರಿ !

ಸಮರಸೇನನಿಗೆ ಏನನ್ನೂ ನಿರ್ಣಯಿಸಲಾಗದೆ ಹೋಯಿತು. ಒಂದುಸಾರಿ ಆ ತ್ರಿಶೂಲವು ವ್ಯಾಘ್ರದತ್ತನ ಕೈಗೆ ಸಿಕ್ಕಿತೆಂದರೆ ಆಮೇಲೆ ಅವನನ್ನು ಇದಿರಿಸುವುದು ಯಾರಿಂದಲೂ ಸಾಧ್ಯವಾಗದು. ಮಂತ್ರ ತಂತ್ರಗಳಲ್ಲಿ ಸಾಟಿ ಇಲ್ಲದವನೆಂದು ಭಾವಿಸಲ್ಪಡುವ ಏಕಾಕ್ಷೀ, ಚತುರ್ನೇತ್ರರು ಕೂಡಾ ಇವನಿಗೆ ದಾಸೋಹಂ ಅನ್ನಬೇಕಾದೀತು. ಧನರಾಶಿಯಿಂದ ತುಂಬಿದ ನಾವೆಯೂ ಅದನ್ನು ಕಾಪಾಡುವ ನಾಗಕನ್ಯೆಯೂ ಈ ದುಷ್ಟ ವ್ಯಾಘ್ರದತ್ತನ ವಶವಾಗಿಬಿಟ್ಟರೆ ಕೇಳುವುದೇ ಬೇಡ, ಇವನ ಅಟ್ಟಹಾಸವನ್ನು ! ಲೋಕನಾಶವೇ ನಿಜ.

ಇಂತಹ ಆಪತ್ತಿನ ಕಾಲದಲ್ಲಿ ತನಗೆ ಸಹಾಯ ಮಾಡಬಲ್ಲವನು ಚತುರ್ನೇತ್ರನೊಬ್ಬನ ಹೊರತು ಬೇರೆ ಯಾರೂ ಇಲ್ಲ. ಆ ಚತುರ್ನೇತ್ರನಿಗಾದರೂ ಈ ಪರಿಸ್ಥಿತಿ ತಿಳಿಯುವುದು ಹೇಗೆ ? ನಾಗಕನ್ಯೆಗಾಗಿ ಪ್ರಯತ್ನ ಮಾಡುವ ಅವನಿಗೆ, ಶಾಕ್ತೇಯನ

ಮಹಾಶಕ್ತಿ ಹೊಂದಿದ ತ್ರಿಶೂಲದ ಸಂಗತಿ ಗೊತ್ತಿದೆಯೋ ಇಲ್ಲವೋ ? ಆ ತ್ರಿಶೂಲವನ್ನೊಂದು ಸಂಪಾದಿಸಿಕೊಳ್ಳಲು ಸಾಧ್ಯವಾದರೆ, ಮೊತ್ತ ದ್ವೀಪರಾಜ್ಯಗಳನ್ನು ಮಾತ್ರವಲ್ಲದೆ ಪ್ರಪಂಚವನ್ನೇ ಗೆದ್ದುಬಿಡಬಹುದು !

ಹೌದು. ವ್ಯಾಘ್ರದತ್ತನಿಗೆ ಆ ತ್ರಿಶೂಲದ ಮೇಲೆ ಅಷ್ಟು ನಂಬುಗೆ ಇರುವುದರಿಂದ, ಸಮರಸೇನನೂ ಅದನ್ನು ನಂಬಲೇ ಬೇಕಾಗಿದೆ.

ಹೀಗೆ ಸಮರಸೇನನ ಮನಸ್ಸಿನಲ್ಲಿ ಆಲೋಚನೆಗಳು ತೀವ್ರವಾಗಿ ಏಳುತ್ತಿರಲು, ವ್ಯಾಘ್ರದತ್ತನ ಗಂಟೆಯಂಥ ಶಬ್ದವು ಪುನಃ ಮಾರ್ಮೊಳಗಿತು : "ಕೇಳಿರಿ ! ನಾಳೆ ಮಹಾ ಪರ್ವದಿನ. ಅಮಾವಾಸ್ಯೆಯೂ ಆದಿತ್ಯವಾರವೂ ಕೂಡಿ ಬಂದಿದೆ. ಆದುದರಿಂದ ನಾವು ಈ ದಿನ ರಾತ್ರಿ ಇಲ್ಲಿಯೇ ವಿಶ್ರಾಂತಿ ತೆಗೆದುಕೊಳ್ಳೋಣ. ನಾಳೆ ರಾತ್ರಿ ಸರಿಯಾಗಿ ಒಂದು ಗಂಟೆಯ ಹೊತ್ತಿಗೆ ನಾವು ಆನೆಗಳ ವನವನ್ನು ಪ್ರವೇಶಿಸಬೇಕು. ಆಗ ಎಲ್ಲರೂ ಉತ್ಸಾಹದಲ್ಲಿರಬೇಕು."

ಹೀಗೆ ಹೇಳಿ ವ್ಯಾಘ್ರದತ್ತನು ಅಲ್ಲಿದ್ದ ಒಂದು ಬಂಡೆಗಲ್ಲಿನ ಮೇಲೆ ಕುಳಿತುಕೊಂಡನು. ಭಟರು ಕೂಡಾ ತಮ್ಮ ತಮ್ಮ ಆಯುಧಗಳನ್ನು ಕೆಳಗಿಟ್ಟು ಅವನ ಸುತ್ತಲೂ ವಲಯಾಕಾರದಲ್ಲಿ ಕುಳಿತರು.

ವ್ಯಾಘ್ರದತ್ತನ ಮಾತುಗಳಿಂದ ಸಮರಸೇನನಿಗೆ ಸ್ವಲ್ಪ ಆಶಾಭಾವವೆದ್ದಿತು. ಇನ್ನೂ ಇಪ್ಪತ್ತನಾಲ್ಕು ಗಂಟೆಗಳ ಅವಕಾಶವಿದೆ. ಆ ಸಮಯದಲ್ಲಿ ಯಾವುದೋ ಒಂದು ವಿಧವಾಗಿ, ವ್ಯಾಘ್ರದತ್ತನನ್ನು ಹತಮಾಡಬೇಕು. ಅವರೆಲ್ಲ ತೂಕಡಿಸಿಕೊಂಡಿದ್ದಾಗಲಾದರೂ ಸರಿಯೆ. ದುಷ್ಟದಮನಕ್ಕೆ ಧರ್ಮಾಧರ್ಮವೆಣಿಸಿಕೊಂಡಿದ್ದರೆ ಸಾಗದು. ಅದು ದೋಷವೇನೂ ಆಗದು. ಪ್ರಸ್ತುತ ನಾವು ಕೂಡಾ ತುಸು ದಣಿವಾರಿಸಿಕೊಳ್ಳೋಣ.

ಹೀಗೆಂದುಕೊಂಡು ಸಮರಸೇನನು ತಟಕ್ಕನೆ ಹಿಂದಕ್ಕೆ ತಿರುಗಿದನು. ಹಾಗೆ ತಿರುಗುವಾಗ ಅವನು ಆತುಕೊಂಡಿದ್ದ ಅರ್ಧ ಮುರಿದ ಕಲ್ಲಿನ ಕಂಬವು ದೊಡ್ಡ ಶಬ್ದದಿಂದ ಹೊರಳಿಬಿತ್ತು. ಸಮರಸೇನನೂ ಸೈನಿಕರೂ ತಪ್ಪಿಸಿಕೊಂಡು ಅತ್ತ ಹಾರಿದರು.

ಆ ಶಬ್ದವನ್ನು ಕೇಳಿದ ಕೂಡಲೇ ಪೆಟ್ಟು ತಿಂದ ಹೆಬ್ಬುಲಿಯ ಹಾಗೆ ವ್ಯಾಘ್ರದತ್ತನು ಎದ್ದುನಿಂತನು. ಅವನೊಂದಿಗೆ ಅವನ ಭಟರು ಕೂಡಾ ಎದ್ದರು. ಏಳುವಾಗಲೇ ತಮ್ಮ ಆಯುಧಗಳನ್ನೂ ಎತ್ತಿಕೊಂಡಿದ್ದರು. ವ್ಯಾಘ್ರದತ್ತನ ದೃಷ್ಟಿ ಸಮರಸೇನನು ಅಡಗಿರುವ ಶಿಥಿಲ ಭವನದ ಮೇಲೆ ಬಿತ್ತು. ಅವನ ಹುಬ್ಬುಗಳು ಎತ್ತರಿಸಿದುವು. ಅವನು ಕೋಪದಿಂದ ಕೆರಳಿ ಕೆಂಡವಾದನು. (ಇನ್ನೂ ಇದೆ)






## ೧೬

[ವ್ಯಾಘ್ರದತ್ತನ ಕಣ್ಣಿಗೆ ಬೀಳದಂತೆ ತಪ್ಪಿಸಿಕೊಂಡ ಸಮರಸೇನನು ಶಿಥಿಲನಗರವನ್ನು ತಲುಪಿದನು. ವ್ಯಾಘ್ರದತ್ತನು ತನ್ನ ಭಟರೊಂದಿಗೆ ಅಲ್ಲಿಗೆ ಬಂದನು. ಶಾಕ್ತೇಯನ ಮಹತ್ವದ ತ್ರಿಶೂಲವು ಆನೆಗಳ ವನದೊಳಗೆ ಗುರು ದ್ರೋಹಿಯ ಅಸ್ಥಿಪಂಜರದೊಳಗಿರುವುದೆಂದು ಅವನಿಗೆ ಗೊತ್ತಾಯಿತು. ಆಗ ಆ ಪ್ರದೇಶದಲ್ಲಿ ಇನ್ನಾರೋ ಇರುವರೆಂದು ಸಂದೇಹವೆದ್ದಿತು.]

ವ್ಯಾಘ್ರದತ್ತನು ತಟಸ್ಥನಾಗಿ ನಿಂತು, ಕಣ್ಣುಗಳಲ್ಲಿ ತೀಕ್ಷ್ಣತೆಯ ನೆಟ್ಟ ನೋಟವನ್ನು ತಂದುಕೊಂಡು, ಸಮರಸೇನನು ತನ್ನ ಸೈನಿಕರೊಂದಿಗೆ ಹುದುಗಿರುವ ದಿಕ್ಕನ್ನೇ ನೋಡುತ್ತಿದ್ದನು. ಅವನಿಗೆ ಹದ್ದಿನ ದೃಷ್ಟಿಯೂ ನಾಯಿಯ ಮೂಗೂ, ಹಾವಿನ ಕಿವಿಯೂ ಇವೆಯೇನೋ ಎಂದು ಸಮರಸೇನನು ಅಂದುಕೊಂಡನು.

ಹಾಗೆ ಸ್ವಲ್ಪ ಹೊತ್ತು ನೋಡಿದ ಮೇಲೆ ವ್ಯಾಘ್ರದತ್ತನು ತನ್ನ ಭಟರೊಂದಿಗೆ " ಎಲೋ, ಅಲ್ಲಿ ಕಾಣುವ ಶಿಥಿಲಗಳ ಮರೆಯಲ್ಲಿ ಖಂಡಿತವಾಗಿಯೂ ಯಾರೋ ಅಡಗಿದ್ದಾರೆ. ಅವರು ನಮ್ಮ ಪ್ರಬಲ ಶತ್ರುವಾದ ಶಿವದತ್ತ ಅಥವಾ ಅವನ ಅನುಚರರೋ ಇರಬೇಕು. ಅವರು ಯಾರೇ ಆಗಿರಲಿ, ಸುಮ್ಮನೆ ಬಿಟ್ಟು ಹೋಗಬಾರದು. ಹಿಡಿದುಕಟ್ಟಿ ಹಾಕಲೇಬೇಕು. ತಪ್ಪಿಸಿಕೊಳ್ಳಲು ಬಿಡಬಾರದು. ಜಾಗ್ರತೆ! " ಎಂದನು.

ಅವನು ಹೇಳಿದ ಮಾತು ಸಮರಸೇನನ ಕಿವಿಗೂ ಬಿತ್ತು. ಅಂತಲೇ ಬರಲಿರುವ ಆಪತ್ತು ಏನೆಂದು ಗೊತ್ತಾಯಿತು. ತನ್ನ ಜತೆಯಲ್ಲಿರುವ ಅರುಮಂದಿ ಸೈನಿಕರೊಂದಿಗೆ, ಕ್ರೂರನಾದ ವ್ಯಾಘ್ರದತ್ತನನ್ನು ಇದಿರಿಸುವುದೆಂದರೆ, ಆತ್ಮಹತ್ಯಕ್ಕೆ ಸಮಾನವಾಗು



ವುದೆಂದು ತೋರಿತು. ಆದುದರಿಂದ ಪ್ರಸ್ತುತ ಪರಿಸ್ಥಿತಿಯಲ್ಲಿ ಸಾಧ್ಯವಾದಷ್ಟು ಬೇಗದಲ್ಲಿ, ಎಲ್ಲಾ ಅವಯವಗಳನ್ನೂ ಚುರುಕು ಮಾಡಿಕೊಂಡು ಆ ಪ್ರದೇಶದಿಂದ ಪಾರಾಗಿ ಬಿಡಬೇಕೆಂದು ತನ್ನ ಅನುಚರರಿಗೂ ಸನ್ನೆ ಮಾಡಿದನು.

ಅಷ್ಟರಲ್ಲಿ ವ್ಯಾಘ್ರದತ್ತನು "ಹೂಂ" ಎಂದು ಆಜ್ಞಾಧ್ವನಿ ಮಾಡಿದನು. ಮರುಕ್ಷಣದಲ್ಲಿ ವ್ಯಾಘ್ರದತ್ತನ ಭಟರು ಭಯಂಕರವಾಗಿ ಬೊಬ್ಬಿರಿದು ಕೂಗುತ್ತ, ಒಮ್ಮೆಗೇ ಸಮರಸೇನನು ಅಡಗಿರುವ ಶಿಥಿಲಗಳ ಕಡೆಗೆ ಧುಮುಕಿ ಧುಮುಕಿ ಬಂದರು. ಸಮರಸೇನನು ತನ್ನ ಸೈನಿಕರಿಗೆ ಸನ್ನೆ ಮಾಡಿ ಅಲ್ಲಿಂದ ಹಿಂದಕ್ಕೆ ಹಾರಿಕೊಂಡು ಓಡಿದನು. ಹಾಗೆ ಓಡುವವರನ್ನು ಶತ್ರುಗಳು ಚೆನ್ನಾಗಿ ನೋಡಿದರು. ಇನ್ನು ಕಾಲಿಗೆ ಬುದ್ಧಿ ಹೇಳುವುದೊಂದೇ ಗತಿಯಾಗಿತ್ತು ಸಮರಸೇನನಿಗೆ. ಆದರೆ ಸಲೀಸಾಗಿ ಓಡಲಾದರೂ ಆ ಶಿಥಿಲ ನಗರದಲ್ಲಿ ಎಲ್ಲಿ ಸಾಧ್ಯವಿದೆ?

ಆರುಮಂದಿ ಸೈನಿಕರೊಂದಿಗೆ ಸಮರಸೇನನು ಒಂದು ಭಾಗದಲ್ಲಿದ್ದರೆ, ಇಪ್ಪತ್ತು ಮಂದಿ ಭಟರೂ ಅವರ ನಾಯಕನಾದ ವ್ಯಾಘ್ರದತ್ತನೂ ಇನ್ನೊಂದು ಕಡೆಯಲ್ಲಿ! ಅವರ ಕೂಗು ಗರ್ಜನೆ ಹಾರಾಟ ಧುಮುಕಾಟ ಹೊಡೆದಾಟಗಳಿಂದ ಆ ಪ್ರದೇಶವೆಲ್ಲಾ ಮಾರ್ಮೊಳಗಿ ಹೋಗುತ್ತಿತ್ತು. ಮಿಂಚಿನ ವೇಗದಲ್ಲಿ ಸಮರಸೇನಾದಿಗಳು ತಪ್ಪಿಸಿಕೊಂಡು ಹೋಗುತ್ತಲೇ ಇದ್ದರು.

ಆ ಶಿಥಿಲ ಭವನಗಳೊಳಗಿನ ಕೋಣೆಗಳಲ್ಲಿ, ಹಜಾರಗಳಲ್ಲಿ, ಮಂಟಪಗಳಲ್ಲಿ, ಗೋಡೆಕಂಬಗಳ ಮರೆಯಲ್ಲಿ, ಅಡಗುತ್ತ ಓಡುತ್ತ ಸಮರಸೇನನೂ, ಸೈನಿಕರೂ ಅಲ್ಲಿಂದ ತಪ್ಪಿಸಿಕೊಳ್ಳಲು ನೋಡುತ್ತ ಅಲ್ಲಲ್ಲೇ ತಿರುಗುತ್ತಿದ್ದರು. ವ್ಯಾಘ್ರದತ್ತನು ತನ್ನ ಭಟರನ್ನು ಎರಡು ಭಾಗವಾಗಿ ಮಾಡಿ ಅವರನ್ನು ತಪ್ಪಿಸಿಕೊಳ್ಳಲು ಬಿಡದೆ ಹಿಡಿಸಲು ಪ್ರಯತ್ನಿಸಿಕೊಂಡೇ ಇದ್ದನು. ಅದು ಫಲಿಸುವ ಆಶೆ ಇದೋ ಅದೋ ಎಂದು ತಪ್ಪಿ ಹೋಗುತ್ತಲೇ ಇದ್ದಿತು.

ಒಡೆದ ಕಂಬಗಳ ಮರೆಯಲ್ಲಿಯೂ ಬಿದ್ದು ಹೋದ ಗೋಡೆಗಳ, ಕಲ್ಲುಮಣ್ಣು ರಾಶಿಗಳ ಹಿಂದೆಯೂ ಅಡಗಿರುತ್ತ, ಅಲ್ಲಿಗೆ ಬಂದ ವ್ಯಾಘ್ರದತ್ತನ ಭಟರನ್ನು ಹೊಡೆಯುತ್ತ ಸಮರಸೇನನೂ ಅವನ ಸೈನಿಕರೂ ಜೀವನ್ಮರಣದ ಹೋರಾಟಕ್ಕೇ ತೊಡಗಿದರು. ವ್ಯಾಘ್ರದತ್ತನ ಭಟರಲ್ಲಿ ಅನೇಕರನ್ನು ಅಲ್ಲಿ ಬಲಿಹಾಕದೆ ತಾವು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲವೆಂದು ಸಮರಸೇನನಿಗೆ ತೋರಿತು. ಆದ್ದರಿಂದ ಅವನ ವಿಜೃಂಭಣೆ ಇಮ್ಮಡಿಸಿತು.

ಆ ಸಮಯದಲ್ಲಿ ತಾಳ್ಮೆಗೆಟ್ಟ ವ್ಯಾಘ್ರದತ್ತನು ತನ್ನ ಭಟರನ್ನು ಹುರುಪುಗೊಳಿಸುತ್ತ, ತಾನೇ ಸ್ವತಃ ಧುಮುಕಿ ಸಮರಸೇನನನ್ನು ಇದಿರಿಸಲು ತಯಾರಾದನು. ಈಗಾಗಲೇ ಸಮರಸೇನನ ಕತ್ತಿಯ ಏಟುಗಳಿಂದ ಅವನ ನಾಲ್ಕೈದು ಮಂದಿ ಭಟರು

ನೆಲಕ್ಕೆಬಿದ್ದು ಪ್ರಾಣಬಿಟ್ಟಿದ್ದರು. ಮತ್ತೆ ಕೆಲವರು ಅರೆಸತ್ತವರಾಗಿದ್ದರು. ಇದು ವ್ಯಾಘ್ರದತ್ತನನ್ನು ಚಂಚಲಗೊಳಿಸಿತು. ಕೇವಲ ನಾಲ್ಕಾರುಮಂದಿಗಳನ್ನು ಹೊಡೆದುರುಳಿಸಲು ಇಷ್ಟು ಕಷ್ಟವೆಂದರೇನಿದು? ವ್ಯಾಘ್ರದತ್ತನು ಹಲ್ಲು ಕಡಿದನು.

ನಾಲ್ಕು ಸುತ್ತಲೂ "ಇದೋ ಇಲ್ಲಿ! ಅದೋ ಅಲ್ಲಿ!" ಎಂಬ ಕೂಗು! ಪೆಟ್ಟು! ಆರ್ತನಾದ! ರೊಚ್ಚುರೋಷ! ಹೀಗೆ ಆ ಪ್ರದೇಶವು ಭೀಕರವಾಯಿತು. ಆಗ ವ್ಯಾಘ್ರದತ್ತನು ಸಮರಸೇನನ ಮೇಲೆ ಧಾವಿಸಿ ಧುಮುಕಿದನು.

ಅತ್ಯಂತ ಬಲವಂತರೂ ಧೈರ್ಯವಂತರೂ ಆದ ಸಮರಸೇನ ವ್ಯಾಘ್ರದತ್ತರ ನಡುವೆ ಖಾಡಾಖಾಡೀ ಖಡ್ಗಯುದ್ಧ ತೊಡಗಿತು. ಅವರ ಪಾದ ಘಾತಗಳ ಹತಿಯಿಂದ, ಗುರಿತಪ್ಪಿ ತಗಲುವ ಕತ್ತಿಗಳ ಪೆಟ್ಟಿನಿಂದ ಮೊದಲೇ ಶಿಥಿಲವಾಗಿದ್ದ ಆ ಪ್ರಾಂತದ ಗೋಡೆಗಳೂ ಕಂಬಗಳೂ ಬಡಬಡನೆ ಬೀಳುತ್ತಿದ್ದುವು. ಅವುಗಳಿಂದ ತಪ್ಪಿಸಿಕೊಳ್ಳುತ್ತ, ಮತ್ತೆ ಮತ್ತೆ ಇದಿರಿಸುತ್ತ ಭಯಂಕರವಾಗಿ ಯುದ್ಧ ಮಾಡುತ್ತಿದ್ದರು. ಈ ಅವಸರದ ಯುದ್ಧದಲ್ಲಿ ತನ್ನ ಅನುಚರರನ್ನು ನೋಡಲು ಸಮರಸೇನನಿಗಾಗಲಿಲ್ಲ.

ಹೀಗೆ ಸ್ವಲ್ಪಹೊತ್ತು ಒಬ್ಬರನ್ನೊಬ್ಬರು ಕೆಡವಲಾಗದೆ ಯುದ್ಧ ಮಾಡುತ್ತಿರಲು, ವ್ಯಾಘ್ರದತ್ತನು ಬಹಳವಾಗಿ ಬಳಲಿದನು. ಈ ಸಂಗತಿ ಅವನು ಶ್ವಾಸ ಬಿಡುವ ರೀತಿಯಿಂದ ಸಮರಸೇನನಿಗೆ ಗೊತ್ತಾಗಿ ಹೊಸ ಉತ್ಸಾಹವೆದ್ದಿತು. ಇದೇ ಸಮಯವೆಂದು ಮತ್ತಿಷ್ಟು ಹುಮ್ಮಸಿನಿಂದ ಹೋರಾಡತೊಡಗಿದನು. ತನ್ನ ಹಿಂದೆ ಏನಿರುವುದೆಂಬುದೊಂದೂ ಅವನಿಂದ ನೋಡಲಾಗಲಿಲ್ಲ.

ಇಷ್ಟರಲ್ಲಿ ಸಂಖ್ಯೆಯಲ್ಲಿ ಎರಡು ಪಾಲಿಗಿಂತ ಹೆಚ್ಚೇ ಇರುವ ವ್ಯಾಘ್ರದತ್ತನ ಭಟರು ಸಮರಸೇನನ ಸೈನಿಕರನ್ನು ಹಿಡಿದು ಬಂಧಿಸಿ ಹಾಕಿಬಿಟ್ಟರು.

ಆ ಸೈನಿಕರಲ್ಲಿ ಇಬ್ಬರು ಮೂವರಿಗೆ ದೊಡ್ಡ ದೊಡ್ಡ ಗಾಯಗಳಾಗಿದ್ದುವು. ಹಾಗೆ ಸಮರಸೇನನ ಸೈನಿಕರನ್ನು ಕಟ್ಟಿ ಹಾಕಿದ ಮೇಲೆ ವ್ಯಾಘ್ರದತ್ತನ






ಭಟರು ತಮ್ಮ ನಾಯಕನಿಗೆ ಸಹಾಯಮಾಡಲು ಹೊರಟರು. ಕೋಲಾಹಲವು ಸ್ವಲ್ಪ ಕಡಿಮೆಯಾಗಿ, ತನ್ನ ಸೈನಿಕರ ಕೂಗು ಕೇಳದಿರುವುದನ್ನು ನೋಡಿ ಸಮರಸೇನನಿಗೆ ಚಿಂತೆಯಾಯಿತು. ಅವರೆಲ್ಲಾ ಬಂಧಿಸಲ್ಪಟ್ಟರೋ ಅಥವಾ ಸತ್ತುಗಿತ್ತು, ಎಲ್ಲಿ ಯಾದರೂ ಬಿದ್ದರೋ ಎಂದು ತಿಳಿಯದೆ ಚಡಪಡಿಸಿದನು. ಆಗ ಅವನಿಗೂ ಬದುಕಬೇಕೆಂಬ ಆಸೆ ಹೋಯಿತು. ಇನ್ನು ಸಾಯುವ ಮೊದಲು ಈ ಕ್ರೂರನಾದ ವ್ಯಾಘ್ರದತ್ತನನ್ನು ಕೊಲ್ಲದೆ ಬಿಡಬಾರದೆಂಬ ಹುಚ್ಚು ಕೆಚ್ಚು ಬಂತು ಅವನಲ್ಲಿ.

ಈಗ ಅವನು ಇಮ್ಮಡಿ ಪೌರುಷದಿಂದ ವ್ಯಾಘ್ರದತ್ತನನ್ನು ಹಣೆಯ ತೊಡಗಿದನು. ತನ್ನ ಮೇಲೆ ವ್ಯಾಘ್ರದತ್ತನ ಭಟರು ಹಿಂದಿನಿಂದ ಬೀಳದಂತೆ ಎಚ್ಚರ ವಹಿಸಿ ಗೋಡೆಯನ್ನು ಒರಗಿ ಕೊಂಡು ಸಮರಸೇನನು ಯುದ್ಧ ಮಾಡುತ್ತಿದ್ದನು. ಅದೇ ಅವನಿಗೆ ಮುಳುವಾಯಿತು. ಶಿಥಿಲಾವಸ್ಥೆಯಲ್ಲಿರುವ ಆ ಗೋಡೆ ಒಮ್ಮೆಗೇ ಬೀಳಬಹುದೆಂದು ಅವನು ನಂಬಿರಲಿಲ್ಲ.

ಆದರೆ ಅವನ ಮುಂದಿನಿಂದ ಹೋರಾಡುವ ವ್ಯಾಘ್ರದತ್ತನಿಗೆ ಮಾತ್ರ ಆ ಸಂಗತಿ ಗೊತ್ತಾಗಿ ಅವನ ಮೇಲೆ ಹಾರುತ್ತ, ಗೋಡೆಯನ್ನೂ ಆಗಾಗ ಒದೆಯುತ್ತಿದ್ದನು.

ಇದರಿಂದ ಆ ಭಯಂಕರ ಗುಟ್ಟನ್ನು ಅರಿತು ಕೊಂಡ ಸಮರಸೇನನು ಆ ಗೋಡೆಯ ಮೇಲೆ ಹಾರಿ ಆಚೆಗೆ ಧುಮುಕಲು ನೋಡಿದನು. ಅವನು ಗೋಡೆಯನ್ನು ಹಿಡಿದು ಮೇಲೆ ಹಾರುವ ಹೊತ್ತಿಗೆ ಆ ಗೋಡೆ ನಾಲ್ಕಾರು ತುಂಡುಗಳಾಗಿ ಹಿಂದೆಯೂ ಮುಂದೆಯೂ ಜರಿದುಬಿತ್ತು. ಸಮರಸೇನನು ಕಲ್ಲುಗಳ ರಾಶಿಯ ನಡುವೆ ಸಿಕ್ಕಿಕೊಂಡು, ಏಳುವುದಕ್ಕೆ ಸಾಧ್ಯವಾಗದೆ ಚಡಪಡಿಸಿದನು.

ವ್ಯಾಘ್ರದತ್ತನು ಇದೇ ಅವಕಾಶವೆಂದುಕೊಂಡು, ಕರ್ಕಶವಾಗಿ ವಿಜಯ ಗರ್ಜನೆ ಮಾಡಿ ಸಮರ ಸೇನನ ಮೇಲೆ ಹಾರಿಬಿದ್ದನು. ಅವನ ಬೆನ್ನಿಗೇ ಅವನ ಭಟರೂ ಸೇರಿಕೊಂಡರು. ಎಲ್ಲರೂ ಸೇರಿ ಸಮರಸೇನನ ಕೈಗಳನ್ನೂ ಕಾಲುಗಳನ್ನೂ ಗಟ್ಟಿಯಾಗಿ ಹಿಡಿದು ಕದಲದಂತೆ ಮಾಡಿದರು. ಇಷ್ಟುಮಾಡುವಾಗ ಬೋನಿಗೆ ಬಿದ್ದ ಸಿಂಹವನ್ನು ಬಂಧಿಸುವ ಅನುಭವ ವಾಯಿತು ವ್ಯಾಘ್ರದತ್ತನಿಗೆ!

ವ್ಯಾಘ್ರದತ್ತನು ಆಜ್ಞಾಪಿಸಿದ ಕೂಡಲೇ ಭಟರು ಹಗ್ಗದಿಂದ ಸಮರಸೇನನ ಕೈಗಳನ್ನು ಕಟ್ಟಿಬಿಟ್ಟರು. ಅವನ ಕತ್ತಿಯನ್ನು ವ್ಯಾಘ್ರದತ್ತನು ಕಿತ್ತುಕೊಂಡು ಭಯಂಕರವಾಗಿ ನಕ್ಕನು.

ಮಹಾ ಬಲಶಾಲಿಯಾದ ಶತ್ರುವೊಬ್ಬನನ್ನು ಸೋಲಿಸಿ ಕಟ್ಟಿಹಾಕಿದ ಸಂತೋಷದಲ್ಲಿ ವ್ಯಾಘ್ರ ದತ್ತನು ಪರವಶನಾಗಿ, ಕ್ರೂರವಾಗಿ ಹಲ್ಲು ಕಡಿದು, "ಇನ್ನೇನು ಮಾಡಬಲ್ಲೆ! ಬುದ್ಧಿ ಬಂದಿತೇ ಈಗಾದರೂ? ಮೊದಲು ನಾನು ಮಾತಾಡಿಸಿ

ದಾಗಲೇ ನನ್ನೊಡನೆ ರಾಜೀ ಮಾಡಿಕೊಂಡಿದ್ದರೆ ಇಂಥಾ ದುರ್ಗತಿ ನಿನಗೆ ಬರುತ್ತಿತ್ತೇ ? ಇನ್ನು ನಿನ್ನಿಂದ ನನಗೇನೂ ಪ್ರಯೋಜನವಿಲ್ಲ. ನನಗೆ ಬೇಕಾದ ಶಾಕ್ತೇಯನ ತ್ರಿಶೂಲವು ಎಲ್ಲಿರುವುದೆಂಬ ಗುಟ್ಟು ತಿಳಿದುಹೋಯಿತು. ಅದನ್ನು ತಿಳಿದ ಇನ್ನೊಬ್ಬನಾದ ನೀನು ಸಾಯದ ಗತ್ಯಂತರವಿಲ್ಲ. ಮಹಾವೀರನಾದ ನಿನಗೆ ಎಂಥಾ ಕೆಟ್ಟ ಸಾವು ಬಂತು! ಪಾಪ!" ಎಂದು ಭಯಂಕರವಾಗಿ ನಕ್ಕನು.

ವ್ಯಾಘ್ರದತ್ತನ ಮಾತನ್ನು ಕೇಳಿ ಸಮರಸೇನನು ಸ್ವಲ್ಪವೂ ಭೀತಿಯನ್ನು ವ್ಯಕ್ತಪಡಿಸಲಿಲ್ಲ. ಈಗ ಅವನು ಮರಣಕ್ಕೆ ಸಿದ್ಧನಾಗಿಯೇ ಇದ್ದನು. ಈಗ ಅವನಿಗೆ ತನ್ನ ಸಾವಿನ ಚಿಂತೆಯ ಬದಲಿಗೆ, ತನ್ನ ನಾಯಕತ್ವವನ್ನು ನಂಬಿಕೊಂಡು ಕಷ್ಟಗಳಿಗೆ ಸಿಕ್ಕಿಬಿದ್ದ ತನ್ನ ಸೈನಿಕರ ಗುತಿಯನ್ನು ಕುರಿತೇ ಹೆಚ್ಚಿನ ಚಿಂತೆಯಾಯಿತು. ಸೇನಾಧಿಪತಿಯಾದ ತಾನು ಸೈನಿಕರಿಗೆ ಸರಿಯಾದ ನಾಯಕತ್ವವನ್ನು ವಹಿಸದೆ ಹೋದೆನೇನೋ ಅನಿಸಿ ತುಂಬಾ ವೇದನೆಗೊಳಗಾದನು.

ಸಮರಸೇನನು ಮೌನವಾಗಿರುವುದನ್ನು ನೋಡಿ ವ್ಯಾಘ್ರದತ್ತನು ಮತ್ತೊಂದು ವಿಧವಾಗಿ ಆಲೋಚಿಸಿದನು. ಸ್ವಲ್ಪವೂ ಚಲಿಸದೆ ನಿಶ್ಚಿಂತನಾಗಿರುವಂತೆ ಕಾಣುವ ಸಮರಸೇನನ ಭಾವವೇನಿರಬಹುದು ? ಯಾರ ಸಹಾಯವನ್ನೋ ಇನ್ನೂ ನಂಬಿಕೊಂಡಿರುವನೇನೋ ? ಅದಕ್ಕೇ ಹೀಗೆ ನಿರ್ಭಯನಾಗಿರಬೇಕು. ಅದು ಯಾರಾಗಿರಬಹುದು ? ಇಲ್ಲೆಲ್ಲಿಯಾದರೂ ಸಮೀಪದಲ್ಲಿರುವರೇನೋ?

ಹೀಗೆ ಅನುಮಾನಿಸಿಕೊಂಡು ವ್ಯಾಘ್ರದತ್ತನು, "ನಿನಗೆ ಈ ಕಷ್ಟದಶೆಯಲ್ಲಿ ಸಹಾಯಕ್ಕೆ ಬರುವವರು ನನ್ನ ಹೊರತು ಬೇರೆ ಯಾರೂ ಇಲ್ಲ. ಆ ಸಂಗತಿ ಮರೆಯಬೇಡ. ಈಗ ನಿನ್ನ ಇಷ್ಟ ದೇವರನ್ನು ನೆನೆಯುತ್ತಾ, ಕೊನೆಯ ಮಾತು ಏನಾದರಿದ್ದರೆ ಹೇಳಿಬಿಡು" ಎಂದನು.



ತನ್ನ ಮಾತು ಕೇಳಿ, ತನಗೆ ಸಹಾಯಮಾಡುವವರ ಹೆಸರನ್ನು ಹೇಳುವನೆಂದು ವ್ಯಾಘ್ರದತ್ತನು ಆಶಿಸಿದನು.

ಸಮರಸೇನನು ಎಷ್ಟು ಬಲವಂತನೋ ಅಷ್ಟು ನಿಶಿತಬುದ್ಧಿಯವನೂ ಹೌದು. ವ್ಯಾಘ್ರದತ್ತನ ಮನಸ್ಸಿನಲ್ಲಿ ಏಳುವ ಭಯಸಂದೇಹಗಳನ್ನು ಅವನ ಮುಖಭಾವದಿಂದಲೇ ಕಂಡು ಹಿಡಿದನು. ಇದೇ ಸಮಯದಲ್ಲಿ ಅವನನ್ನು ಸ್ವಲ್ಪ ಹೆದರಿಸಿದರೆ ತನಗೆ ಉಪಯೋಗವಾಗಬಹುದೆಂದು ತೋರಿತು.

ಅವನು ಗಂಭೀರ ಸ್ವರದಿಂದ, "ವ್ಯಾಘ್ರದತ್ತಾ! ಶಾಕ್ತೇಯನ ತ್ರಿಶೂಲವು ಎಲ್ಲಿರುವುದೆಂಬುದು ನಿನಗೊಬ್ಬನಿಗೇ ಗೊತ್ತಿರುವುದೆಂದು ಕೊಳ್ಳಬೇಡ. ಅಲ್ಲದೆ ತ್ರಿಶೂಲವು ಎಲ್ಲಿರುವುದೆಂದು ತಿಳಿದ ಮಾತ್ರಕ್ಕೆ ಪ್ರಯೋಜನವೂ ಇಲ್ಲ, ಗೊತ್ತೇ ?" ಎಂದು ನಕ್ಕನು.




ಆ ಮಾತು ಕೇಳಿ ವ್ಯಾಘ್ರದತ್ತನು ಬೆರಗಾದನು. ಶಾಕ್ತೇಯನ ತ್ರಿಶೂಲವು ಆ ಶಿಥಿಲ ಪ್ರಾಂತ ದಲ್ಲಿರುವ ಆನೆಗಳ ವನದೊಳಗಿರುವ ಗುರು ದ್ರೋಹಿಯ ಅಸ್ಥಿ ಪಂಜರದೊಳಗಿರುವುದೆಂದು ಶಿವದತ್ತನಿಗೆ ಗೊತ್ತಿದೆ. ಅದನ್ನು ತಾನು ತನ್ನ ಭಟರೊಂದಿಗೆ ಹೇಳುವುದನ್ನು ಈ ಸಮರಸೇನನು ಕೇಳಿಸಿಕೊಂಡಿದ್ದಾನೆ.

"ಆ ಮಹಾ ತ್ರಿಶೂಲದ ಸಂಗತಿಯನ್ನು ಮರೆಯಲ್ಲಿದ್ದು ನೀನು ಕೇಳಿಸಿಕೊಂಡಿರುವಿಯೆಂದು ನನಗೆ ಗೊತ್ತಿದೆ. ಶಿವದತ್ತನಿಗೆ ಕೂಡಾ ಅದು ಇರುವ ಜಾಗ ಗೊತ್ತಿದೆ. ಆದರೆ ಈಗ ನೀನೂ ಅವನೂ ನನ್ನನ್ನು ಅಡ್ಡಿಪಡಿಸುವ ಸ್ಥಿತಿಯಲ್ಲಿಲ್ಲ ವೆಂದು ತಿಳಿ. ನನಗೇ ಅದು ಇನ್ನು ಸ್ವಲ್ಪ ಹೊತ್ತಿನಲ್ಲೇ ಸಿಗುತ್ತದೆ. ಹಾಗಿರುವಾಗ ಅದು ನನಗೆ ಸಿಗದೆ ಹೋಗುವಂತೆ ಮಾಡುವವನು ಇನ್ಯಾವನಿದ್ದಾನೆ ?" ಎಂದು ವ್ಯಾಘ್ರದತ್ತನು ಪ್ರಶ್ನಿಸಿದನು.

ಸಮರಸೇನನು ಆ ಪ್ರಶ್ನೆಗೆ ಉತ್ತರವೇನೂ ಹೇಳದೆ ಸುಮ್ಮನೆ ನಕ್ಕು ತಲೆಯಾಡಿಸಿದನು. ಅದರಿಂದ ವ್ಯಾಘ್ರದತ್ತನಲ್ಲಿ ಅನುಮಾನವು ಇನ್ನಷ್ಟು ಹೆಚ್ಚಾಗಬೇಕೆಂದು ಸಮರಸೇನನ ಅಭಿಪ್ರಾಯ ವಾಗಿತ್ತು. ಅದು ಫಲಿಸಿಕೊಂಡು ಬರುವುದೆಂಬುದನ್ನು ಸೂಚಿಸುವಂತೆ, ವ್ಯಾಘ್ರದತ್ತನ ಮುಖವು ಬೆಪ್ಪುಬಡಿದಂತಾದುದನ್ನು ನೋಡಿದನು.

ಆಗ ಸಮರಸೇನನು, "ವ್ಯಾಘ್ರದತ್ತಾ, ತ್ರಿಶೂಲವು ನಿನ್ನ ಕೈಗೆ ಸಿಗದಂತೆ ಮಾಡಬಲ್ಲವರು ಇಬ್ಬರಿದ್ದಾರೆ. ಅವರಲ್ಲಿ ಒಬ್ಬನನ್ನು ಮಾತ್ರ ನೀನು ಬಂಧಿಸಲು ಸಾಧ್ಯವಾಗಿದೆ. ಆದರೆ ಆ ತ್ರಿಶೂಲವು ನಿನ್ನ ಕಣ್ಣಿಗೆ ಬೀಳುವುದಕ್ಕೆ ಮೊದಲೇ ನಿನ್ನನ್ನು ಹತಮಾಡಬಲ್ಲವನು ಮತ್ತೊಬ್ಬನಿದ್ದಾನೆ. ಅವನ ಶಕ್ತಿ ಮಾನವಾತೀತವಾದಂಥದು. ಅವನು ನನಗೆ ಪರಮ ಮಿತ್ರ. ಅವನ ಆಜ್ಞೆಯನ್ನು ಪಾಲಿಸಲಿಕ್ಕಾಗಿಯೇ ನಾನು ನಿನ್ನ ವ್ಯಾಘ್ರಮಂಡಲಕ್ಕೆ ಹೊರಟಿದ್ದೆ ಗೊತ್ತೇ ?" ಎಂದನು.

ಸಮರಸೇನನ ಮಾತು ವ್ಯಾಘ್ರದತ್ತನನ್ನು ಕಳವಳ ಪಡಿಸಿತು. ತನ್ನ ವಿಜಯವು ಅಂದುಕೊಂಡ ಹಾಗೆ ಸುಲಭ ಸಾಧ್ಯವಲ್ಲವೆಂದು ಸಂಶಯಪಡ ತೊಡಗಿದನು.

"ನನಗೆ ಆತಂಕ ಒಡ್ಡುವಂಥ ಶಕ್ತಿಯುಳ್ಳ ನಿನ್ನ ಸ್ನೇಹಿತ ಯಾರವನು ? ಭೂಮಿಯಿಂದೆದ್ದು ಬರುತ್ತಾನೋ ಆಕಾಶದಿಂದ ಇಳಿಯುತ್ತಾನೋ?" ಎಂದು ಗರ್ಜಿಸಿ ಕೇಳಿದನು ವ್ಯಾಘ್ರದತ್ತ.

"ಮಹಾ ಮಾಯಾಮಾಂತ್ರಿಕ ಚತುರ್ನೇತ್ರ !" ಎಂದನು ಸಮರಸೇನ. ಚತುರ್ನೇತ್ರನ ಹೆಸರು ಕೇಳಿದ ಕೂಡಲೇ ವ್ಯಾಘ್ರದತ್ತನಲ್ಲಿ ಮಾತ್ರವಲ್ಲ, ಅವನ ಭಟರಲ್ಲಿಯೂ ಭೀತಿಯ ಸಂಚಲನೆ ತೋರಿತು. ಭಟರು ಭಯಕಂಪಿತರಾಗಿ ತಮ್ಮ ನಾಯಕನನ್ನು ನೋಡತೊಡಗಿದರು. ಅದನ್ನು

ನೋಡಿ ವ್ಯಾಘ್ರದತ್ತನು ಇಲ್ಲದ ಉತ್ಸಾಹವನ್ನು ಬರಿಸಿಕೊಂಡು. "ಓಹೋ! ಚತುರ್ನೇತ್ರನನ್ನು ನೀನು ತಿಳಿದಿರುವಂತಿದೆ!" ಎಂದನು.

"ಅವನ ಆಜ್ಞೆಯಿಂದಲೇ ನಾನು ಇಲ್ಲಿಗೆ ಬಂದಿದ್ದೇನೆಂದು ಆಗಲೇ ಹೇಳಿದೆನಲ್ಲ? ಮರೆತು ಬಿಟ್ಟೆಯಾ?" ಎಂದನು ಸಮರಸೇನ.

ಮುಂದೇನು ಮಾಡುವುದೆಂದು ತಿಳಿಯದೆ ವ್ಯಾಘ್ರದತ್ತನು ತಲೆಯಿಂದ ಕಾಲಿನ ವರೆಗೂ ನಡುಗತೊಡಗಿದನು. ಚತುರ್ನೇತ್ರನನ್ನು ಕುರಿತೂ ಅವನ ಅದ್ಭುತ ಶಕ್ತಿಗಳನ್ನು ಕುರಿತೂ ಅವನು ಕೇಳಿ ತಿಳಿದಿದ್ದನು.

ಅಷ್ಟರಲ್ಲಿ ದೂರದಲ್ಲಿ ಏನೋ ಕೋಲಾಹಲ ಧ್ವನಿ ಕೇಳತೊಡಗಿತು. ಒಬ್ಬ ಭಟನು ಓಡುತ್ತಾ ಅಲ್ಲಿಗೆ ಬಂದು. "ಅಯ್ಯಾ! ಶಿವದತ್ತನು ತನ್ನ ಪರಿವಾರದೊಂದಿಗೆ ಈ ಶಿಥಿಲ ನಗರವನ್ನು ಪ್ರವೇಶಿಸಿಬಿಟ್ಟನು" ಎಂದನು.

ವ್ಯಾಘ್ರದತ್ತನ ತಲೆಯ ಮೇಲೆ ಸಿಡಿಲು ಬಿದ್ದಂತಾಯಿತು. ಮನಸ್ಸಿನಲ್ಲಿ ತೀವ್ರವಾದ ಆಲೋಚನೆ ತಿರುಗತೊಡಗಿತು. ತನ್ನೊಂದಿಗಿರುವ ಕೆಲವು ಮಂದಿ ಸೈನಿಕರೊಡನೆ ಶಿವದತ್ತನನ್ನು ಇದಿರಿಸಿ ಹೋರಾಡುವುದು ಒಳ್ಳೆಯದೋ, ಅಥವಾ ಅಲ್ಲಿಂದ ಪಲಾಯನ ಸೂತ್ರ ಪಠಿಸುವುದು ಒಳ್ಳೆಯದೋ ಎಂದು ಅವಸರವಾಗಿ ಯೋಚಿಸತೊಡಗಿದನು. ಈಗ ಸಮರಸೇನನನ್ನು ಏನು ಮಾಡುವುದು? ತಟ್ಟನೆ ಅವನ ಕುತ್ತಿಗೆ ಕಡಿಯುವುದು ಒಳ್ಳೆಯದೆನಿಸಿದರೂ, ಅದು ಇವನ ಮಿತ್ರ ಚತುರ್ನೇತ್ರನ ಕೋಪಕ್ಕೆ ಪಾತ್ರವಾದೀತೆಂದು ಭಯವಾಯಿತು. ಚತುರ್ನೇತ್ರನಿಗೆ ಕೋಪ ಬಂದರೆ ಒಟ್ಟು ವ್ಯಾಘ್ರ ಮಂಡಲವೇ ನೆಲಸಮವಾದೀತು!

"ಸಮರಸೇನಾ! ಇಷ್ಟೆಲ್ಲ ನಡೆದರೂ ಸಹ ನನಗೆ ನಿನ್ನ ಮೇಲೆ ಪ್ರತ್ಯೇಕ ಸಿಟ್ಟಿಲ್ಲ. ಈಗಾದರೂ ನಾವು ರಾಜೀ ಮಾಡಿಕೊಂಡರೆ ನಿನಗೂ ನನಗೂ ಕ್ಷೇಮವೇ! ಆ ರಾಜಿಯ ಮಾತುಕತೆಗಳನ್ನಾಡಲು ನಾವು ಈ ಸ್ಥಳದಿಂದ ಮತ್ತೊಂದು ಸುರಕ್ಷಿತ ಜಾಗಕ್ಕೆ ಹೋಗಿಬಿಡೋಣ" ಎಂದನು ವ್ಯಾಘ್ರದತ್ತ.

ಸಮರಸೇನನು ಅದಕ್ಕೇನೂ ಅಭ್ಯಂತರ ಹೇಳಲಿಲ್ಲ. ನಿರಾಯುಧನಾದ ಸಮರಸೇನನನ್ನು ಕರೆದುಕೊಂಡು ವ್ಯಾಘ್ರದತ್ತನೂ ಅವನ ಭಟರೂ ಅಲ್ಲಿಂದ ಬೇಗಬೇಗನೇ ಹೋಗತೊಡಗಿದರು. ಅವರಿಗೆ ದೂರವಾಗಿ ಶಿವದತ್ತನನ್ನು ಮುಂದೆ ಬಿಡದೆ ಅನುಚರರೊಂದಿಗೆ ಹೋರಾಟ ನಡೆಸುತ್ತಿರುವ ವ್ಯಾಘ್ರದತ್ತನ ಉಳಿದ ಅನುಚರರ ಕೋಲಾಹಲ ಶಬ್ದ ಕೇಳುತ್ತಿದ್ದಿತು. ತಪ್ಪಿಸಿಕೊಳ್ಳಲು ವ್ಯಾಘ್ರದತ್ತನಿಗೆ ಇದೇ ಒಂದು ಅವಕಾಶ.

—(ಇನ್ನೂ ಇದೆ)






## ೧೭

[ಶಾಕ್ತೇಯನ ಮಹತ್ವದ ತ್ರಿಶೂಲವು ಶಿಥಿಲ ನಗರದಲ್ಲಿರುವ ಸಂಗತಿ ಸಮರಸೇನನಿಗೆ ಗೊತ್ತಾಯಿತು. ವ್ಯಾಘ್ರದತ್ತನು ಅವನ ಮೇಲೆ ದಾಳಿ ಮಾಡಿ ಬಂದೀಯಾಗಿ ಹಿಡಿದನು. ಆ ಸಮಯದಲ್ಲಿ ಶಿವದತ್ತನು ಅಲ್ಲಿಗೇ ಬರುವ ಸಂಗತಿ ವ್ಯಾಘ್ರದತ್ತನಿಗೆ ತಿಳಿಯಿತು. ಕೂಡಲೇ ಅವನು ಬಂದಿಯಾದ ಸಮರಸೇನನೊಂದಿಗೆ ಓಡ ತೊಡಗಿದನು. ಅವನ ಭಟರು ಕೆಲವರು ಶಿವದತ್ತನನ್ನು ತಡೆಯಲು ತೊಡಗಿದರು.]

ವೀರಾಧಿವೀರನಾದ ಶಿವದತ್ತನು ತನ್ನ ಅನುಚರರೊಂದಿಗೆ ಅದೇ ಶಿಥಿಲ ನಗರವನ್ನು ಪ್ರವೇಶಿಸಿರುವುದನ್ನು ತಿಳಿದು ವ್ಯಾಘ್ರದತ್ತನಿಗೆ ಎಷ್ಟು ಭಯವಾಯಿತೋ, ಅಷ್ಟೇ ಉತ್ಸಾಹವು ಸಮರಸೇನನಲ್ಲಿ ಉಂಟಾಯಿತು. ಆ ಶಿವದತ್ತನು ಸ್ವಲ್ಪ ಮೊದಲು ಬಂದಿರಬಾರದೆ ? ಆಗ ತಾನು ಈ ದುಷ್ಟ ವ್ಯಾಘ್ರದತ್ತನ ಕೈಗೆ ಬಂದಿಯಾಗಿ ಸಿಗುತ್ತಿದ್ದಿಲ್ಲವಷ್ಟೆ ? ಈ ವ್ಯಾಘ್ರದತ್ತನನ್ನು ಸಂಹರಿಸಿ ಶಾಕ್ತೇಯನ ಮಹಾ ತ್ರಿಶೂಲವನ್ನು ಕೂಡಾ ತನ್ನದಾಗಿ ಮಾಡಿಕೊಳ್ಳಬಹುದಿತ್ತು. ಈಗ ಕಾಲ ಮೀರಿ ಹೋಯಿತು. ಇನ್ನೆಲ್ಲಾ ಅದೃಷ್ಟದ ಕೈಯಲ್ಲಿದೆ. ಓಡುತ್ತಿರುವ ಸಮರಸೇನನ ಮನಸ್ಸಿನಲ್ಲಿ ಹೀಗೆ ಆಲೋಚನೆಯ ಓಟವೂ ಸಾಗುತಿತ್ತು.

ತನ್ನನ್ನು ಒಮ್ಮೆಗೇ ಕೊಲ್ಲಲು ಹೆದರಿದ ಈ ವ್ಯಾಘ್ರದತ್ತನು ತನ್ನನ್ನು ಎಳೆದುಕೊಂಡು ಓಡುತ್ತ ಏನು ಮಾಡಬೇಕೆಂದಿದ್ದಾನೆ ? ನಿಜ ನೋಡಿದರೆ ಈಗ ತನ್ನನ್ನು ಕೊಲ್ಲುವುದು ವ್ಯಾಘ್ರದತ್ತನಿಗೆ ಸುಲಭ. ಆದರೂ ಏನೋ ಕಾರಣದಿಂದ ಕೊಲ್ಲದಿದ್ದಾನೆ. ಆ ಕಾರಣ ತನಗೆ ಸಾಧಕವಾಗಿದ್ದೀತೆ ? ಇಂತಹ ಆಪತ್ತಿನ ಸಮಯದಲ್ಲಿ ಚತುರ್ನೇತ್ರನು ಅಲ್ಲಿಗೆ




ಬಂದರೆ ಒಳ್ಳೆಯದಿತ್ತು. ಅವನೆಲ್ಲಿದ್ದಾನೋ ಏನೋ? ತನ್ನ ಸಂಗತಿಯನ್ನು ಅವನಿಗೆ ತಿಳಿಸುವರಾರು?

ಹೀಗೆ ಸಮರಸೇನನ ಮನಸ್ಸಿನಲ್ಲಿ ಯೋಚನೆಗಳು ತಿರುಗುತ್ತಿರಲು, ವ್ಯಾಘ್ರದತ್ತನ ಮನಸ್ಸಿನಲ್ಲಿಯೂ ತೀವ್ರಾಲೋಚನೆ ನಡೆದಿತ್ತು. ಯಾವುದು ನಿಜವೆಂದು ತಿಳಿಯುವವರೆಗೂ ಸಮರಸೇನನನ್ನು ಕೊಲ್ಲುವುದು ಕ್ಷೇಮವಲ್ಲವೆಂದು ನಿಶ್ಚಯಿಸಿಕೊಂಡಿದ್ದನು. ಸಾಧ್ಯವಾದರೆ ಸಮರಸೇನನೊಂದಿಗೆ ಸ್ನೇಹವನ್ನು ನಟಿಸಬೇಕೆಂದು ಅವನಿಗೆ ತೋರತೊಡಗಿತು, ವೀರನಾದ ಸಮರಸೇನನನ್ನು ಒಡಂಬಡಿಸಿಕೊಂಡು, ಬಲಿಷ್ಠನಾದ ಶಿವದತ್ತನನ್ನು ಮೊದಲು ಕೊಂದು ಬಿಡಬೇಕು. ಎಲ್ಲಕ್ಕಿಂತ ಮೊದಲು ಆಗಬೇಕಾದುದು ಆ ಶಿವದತ್ತನ ಮರಣವೇ. ಈಗ ಸಮರಸೇನನೊಂದಿಗೆ ಸ್ನೇಹಕ್ಕೆ ಹೇಗೆ ಪ್ರಾರಂಭಿಸುವುದು? ವ್ಯಾಘ್ರದತ್ತನಿಗೆ ಈಗ ಎರಡು ಸಂದೇಹಗಳು: ಶಿವದತ್ತನಿಗೆ ಶಾಕ್ತೇಯನ ತ್ರಿಶೂಲವು ಯಾವ ಸ್ಥಳದಲ್ಲಿ ಅಡಗಿದೆ ಎಂಬುದು ಗೊತ್ತಿದೆಯೆ? ಚಿತುರ್ನೇತ್ರನು ತನ್ನ ಮಿತ್ರನೆಂದು ಸಮರಸೇನನು ಹೇಳಿದುದರಲ್ಲಿ ನಿಜವೆಷ್ಟು? ಈ ಎರಡು ಅನುಮಾನಗಳಿಂದ ವ್ಯಾಘ್ರದತ್ತನು ಓಡುತ್ತಿರಲು, ಅವನ ಹಿಂದೆಯೇ ಉಳಿದವರೂ ಓಡುತ್ತಿದ್ದರು. ಗುಡ್ಡದಾರಿಯ ಏರಿತಗ್ಗುಗಳಲ್ಲಿ ಓಡುತ್ತಿರುವಾಗ, ಶಿವದತ್ತನ ಅನುಚರರೊಂದಿಗೆ ತನ್ನ ಭಟರು ಇನ್ನೂ ಹೋರಾಡಿಕೊಂಡಿರುವರೆಂದು, ಕೇಳಿ ಬರುವ ಅವರ ಶಬ್ದಗಳಿಂದ ಗೊತ್ತಾಗುತ್ತಿದ್ದಿತು. ಆದುದರಿಂದ ಶಿವದತ್ತನು ಥಕ್ಕನೆ ತನ್ನನ್ನು ಬೆಂಬತ್ತಲಾಗದುದನ್ನು ತಿಳಿದು ವ್ಯಾಘ್ರದತ್ತನಿಗೆ ಸ್ವಲ್ಪ ಧೈರ್ಯ ಬಂತು.

ಅವನು ಓಡುತ್ತಾ ಸಮರಸೇನನನ್ನು ನೋಡಿ, "ಸಮರಸೇನಾ, ಬಹಳ ದೂರ ಬಂದಿದ್ದೇವೆ. ಇಲ್ಲಿ ಸ್ವಲ್ಪ ದಣಿವಾರಿಸಿಕೊಳ್ಳೋಣ. ನನ್ನ ವೀರ ಭಟರು ಶತ್ರುಗಳನ್ನು ಮುಂದೆ ಬರಲು ಬಿಡುವುದಿಲ್ಲ." ಎಂದನು.

ಅವನ ಮಾತಿನಲ್ಲಿರುವ ಸೌಮ್ಯತೆಯನ್ನು ನೋಡಿ ಸಮರಸೇನನು ಆಶ್ಚರ್ಯಪಟ್ಟನು. ಬಂದಿಯಾಗಿರುವ ತನ್ನನ್ನು ಮಿತ್ರನ ರೀತಿಯಲ್ಲಿಯೂ, ತನ್ನ ಮಿತ್ರನಾದ ಶಿವದತ್ತನನ್ನು ಶತ್ರುವಿನ ರೀತಿಯಲ್ಲಿಯೂ ಸೂಚಿಸುವಂತಿದೆ ಇವನ ಮಾತು!

"ವ್ಯಾಘ್ರದತ್ತಾ, ನನಗೆ ನೀನು ಧೈರ್ಯ ಹೇಳುವುದರಲ್ಲಿ ಅರ್ಥವೇನಿಲ್ಲ. ಆ ಶಿವದತ್ತನು ಮೊದಲಿನಿಂದಲೂ ನನಗೆ ಸ್ನೇಹಿತನು. ಅವನನ್ನು ಕುರಿತು ಹೆದರಬೇಕಾದ್ದು ಅವನ ಶತ್ರುವಾದ ನೀನೇ ಹೊರತು ನಾನಲ್ಲ." ಎಂದನು ಸಮರಸೇನ.

ಓಡಿದುದರಿಂದ ತುಂಬಾ ದಣಿದು ಹೋದ ವ್ಯಾಘ್ರದತ್ತನು ಒಂದು ಮರವನ್ನು ಒರಗಿ ಕುಳಿತುಕೊಳ್ಳುತ್ತ, ಸಮರಸೇನನ ಮಾತು ಕೇಳಿ, ತನ್ನ ಆತಂಕಗಳು ಇವನಿಗೆ ತಿಳಿಯಿತೇನೋ ಎಂದು ನಿರ್ವಿಣ್ಣನಾದನು. ಕೂಡಲೇ ಏನು ಉತ್ತರ ಹೇಳಬೇಕೆಂದು

ಅವನಿಗೆ ತಿಳಿಯಲಿಲ್ಲ. ಹೇಗಾದರೂ ಸರಿಯೆ, ಸಮರಸೇನನನ್ನು ತನ್ನ ಪಕ್ಷಕ್ಕೆ ತಿರುಗಿಸಿಕೊಳ್ಳಬೇಕೆಂಬ ಭಾವನೆ ಮಾತ್ರ ಬಲವಾಗಿದ್ದಿತು.

"ಸಮರಸೇನಾ, ನಿನಗೆ ಶಿವದತ್ತನನ್ನು ಕುರಿತು ಅಷ್ಟೇನೂ ತಿಳಿದಂತಿಲ್ಲ. ಅದು ಹಾಗಿರಲಿ. ಈಗ ನಾವಿಬ್ಬರೂ ವಿರೋಧಿಗಳಾಗಿರುವುದರಿಂದ ಇಬ್ಬರೂ ನಷ್ಟಪಡಬೇಕಾಗಿರುತ್ತೆ. ಇಕೋ, ನಾನೀಗ ನಿನ್ನನ್ನು ಬಂಧಮುಕ್ತ ಮಾಡುತ್ತೇನೆ. ಇದಕ್ಕೆ ಮುಖ್ಯಕಾರಣ, ನಿನ್ನ ವೀರ ಧೀರ ತನಗಳು. ನಿನ್ನ ಶೌರ್ಯವು ನನಗೆ ತುಂಬಾ ಹಿಡಿಸಿತು. ನೀನು ನನಗೆ ಸರಿಸಮಾನನಾದವನು. ಆ ಮೇಲೆ ಮಿತ್ರರಾಗಿ ನಾವು ಎಲ್ಲ ಸಂಗತಿಯನ್ನೂ ಮಾತಾಡಿಕೊಳ್ಳೋಣ." ಎಂದನು.

ವ್ಯಾಘ್ರದತ್ತನ ಆಜ್ಞೆಯಿಂದ ಇಬ್ಬರು ಭಟರು ಮುಂದೆ ಬಂದು ಸಮರಸೇನನ ಕೈಗಳ ಕಟ್ಟನ್ನು ಬಿಚ್ಚಿಬಿಟ್ಟರು. ಸಮರಸೇನನು ಕೂಡಾ ತಾನಿರುವ ಈ ಸಂಕಟದ ಪರಿಸ್ಥಿತಿಯಲ್ಲಿ ವ್ಯಾಘ್ರದತ್ತನನ್ನು ಹೇಗೋ ಒಂದು ವಿಧದಲ್ಲಿ ತೃಪ್ತಿಗೊಳಿಸುವುದೇ ತನಗೆ ಒಳ್ಳೆಯದೆಂದು ನಿಶ್ಚಯಿಸಿಕೊಂಡನು. ಅವನಿಗೀಗ ತನ್ನ ಭವಿಷ್ಯತ್ತಿನಲ್ಲಿ ಒಂದು ಬಗೆಯ ನಂಬುಗೆಯುಂಟಾಗಿತ್ತು.

"ವ್ಯಾಘ್ರದತ್ತಾ, ಶಾಕ್ತೇಯನ ಅಪೂರ್ವ ಶಕ್ತಿಯುಳ್ಳ ತ್ರಿಶೂಲವನ್ನು ಕುರಿತು ನಮಗಿಬ್ಬರಿಗೂ ಗೊತ್ತಿದೆ. ಅದು ಎಲ್ಲಿರುವುದೆಂದೂ, ಅದನ್ನು ಕೈಯಲ್ಲಿ ಹಿಡಿದವರಿಗೆ ವಶವಾಗುವ ಭೋಗಭಾಗ್ಯಗಳ ಸಮಾಚಾರ ಕೂಡಾ ನಮ್ಮಿಬ್ಬರಿಗೂ ಗೊತ್ತಿದೆ. ಅದಿರಲಿ. ಈ ಭಯಂಕರ ದ್ವೀಪದಲ್ಲಿ ಆ ಶೂಲವು ನಿನ್ನ ಕೈಗೆ ಸಿಕ್ಕಿದ ಮರುಕ್ಷಣದಲ್ಲಿ ನೀನು ಪಡೆಯುವ ಲಾಭವೇನೆಂದು ಹೇಳಬಲ್ಲೆಯಾ ?" ಎಂದು ಸಮರಸೇನನು ಕೇಳಿದನು.

ಈ ಪ್ರಶ್ನೆ ವ್ಯಾಘ್ರದತ್ತನನ್ನು ತಳಮಳಗೊಳಿಸಿತು. ಒಂದು ವೇಳೆ ಧನರಾಶಿಯಿಂದ ತುಂಬಿದ ನಾವೆಯ ಸಂಗತಿ ಸಮರಸೇನನಿಗೆ ಗೊತ್ತಿಲ್ಲವೇನೋ ಎಂಬ ಅನುಮಾನವು ಅವನಿಗಾಯಿತು. ಅದು ಬಹಳ





ಹೊತ್ತುನಿಲ್ಲಲಿಲ್ಲ. ಸಮರಸೇನನು ಈ ದ್ವೀಪಕ್ಕೆ ಬಂದು ಇಷ್ಟೆಲ್ಲಾ ಬನ್ನಬಡುವುದು ಆ ಧನರಾಶಿಗಾಗಿಯೇ ಎಂದು ಅವನಿಗೆ ತೋರಿತು. ಆದುದರಿಂದ ತಾನು ಆ ನಾವೆಯ ಸಮಾಚಾರ ಹೇಳುವುದರಿಂದ ತನಗಾಗುವ ನಷ್ಟವೇನಿಲ್ಲ ಎಂಬ ಧೈರ್ಯ ಬಂದಿತು ವ್ಯಾಘ್ರದತ್ತನಿಗೆ.

" ಸಮರಸೇನಾ, ಮುಖ್ಯ ವಿಷಯ ಹೇಳುತ್ತೇನೆ ಕೇಳು. ಸಮುದ್ರದಲ್ಲಿ ಧನರಾಶಿಯಿಂದ ತುಂಬಿದ ನಾವೆಯೊಂದಿರುವ ಸಂಗತಿ ನಮಗಿಬ್ಬರಿಗೂ ಗೊತ್ತಿದೆ. ಇದರಲ್ಲಿ ನಾವು ಒಬ್ಬರನ್ನೊಬ್ಬರು ಮೋಸಪಡಿಸಬೇಕಾಗಿಲ್ಲ. ಈ ಸಂದರ್ಭದಲ್ಲಿ ನಾನು ಹೇಳುವ ವಿಷಯವನ್ನು ಕೇಳಿ, ಚೆನ್ನಾಗಿ ಆಲೋಚಿಸಿ ಉತ್ತರ ಕೊಡು. ನಾವಿಬ್ಬರೂ ಸೇರಿ ಆ ನಾವೆಯನ್ನು ವಶಪಡಿಸಿಕೊಂಡು, ಅದರಲ್ಲಿರುವ ಧನವನ್ನು ಇಬ್ಬರೂ ಸಮಪಾಲಾಗಿ ಹಂಚಿಕೊಳ್ಳೋಣ. ಇದಕ್ಕೆ ನಿನ್ನ ಅಡ್ಡಿ ಏನೂ ಇಲ್ಲವಷ್ಟೆ? ಈಗಲೇ ನಿನ್ನ ಅಭಿಪ್ರಾಯ ಹೇಳಿಬಿಡು. ಆ ಮೇಲೆ ತಕರಾರು ಮಾಡುವುದು ಒಳ್ಳೆಯದಲ್ಲ" ಎಂದನು ವ್ಯಾಘ್ರದತ್ತ.

" ನೀನು ಎಲ್ಲಿಗೋ ಹೋಗಿ ಮಾತಾಡುತ್ತೀ. ಆ ಸಂಗತಿ ನಮಗಿಂತಲೂ ಮೊದಲು ತಿಳಿದುಕೊಂಡು ಅದಕ್ಕಾಗಿಯೇ ಬಾಯಿ ಬಿಟ್ಟುಕೊಂಡಿರುವ ಆ ಮಾಂತ್ರಿಕರ ಸಮಾಚಾರವೇನೆಂದು ಹೇಳು." ಎಂದು ಸಮರಸೇನನು ನಗುತ್ತಾ ಹೇಳಿದನು.

" ಇನ್ನು ಸ್ವಲ್ಪ ಹೊತ್ತಿನೊಳಗೆ ಅವರ ಪ್ರಶ್ನೆಯೇ ತೀರಿಹೋಗುತ್ತದೆ. ಒಂದು ಸಾರಿ ಆ ಶಾಕ್ತೇಯನ ಅದ್ಭುತ ಶಕ್ತಿಯ ತ್ರಿಶೂಲವು ನಮ್ಮ ಕೈಗೆ ಸಿಕ್ಕಿತೆಂದರೆ ಲೋಕದಲ್ಲಿರುವ ಯಾವ ಶಕ್ತಿಯೂ, ಅದೆಂಥ ದೊಡ್ಡ ಮಂತ್ರಶಕ್ತಿಯಾದರೂ ನಮ್ಮ ಇದಿರು ನಿಲ್ಲಲಾರದೆಂದು ಗಟ್ಟಿಯಾಗಿ ನಂಬಬಹುದು." ಎಂದನು ವ್ಯಾಘ್ರದತ್ತ.

ಆ ಮಾತು ಕೇಳಿ ಸಮರಸೇನನು ಗಟ್ಟಿಯಾಗಿ ಬಾಯಿ ತೆರೆದು ನಕ್ಕನು. ಆ ನಗುವಿನ ಕಾರಣ ತಿಳಿಯದೆ ವ್ಯಾಘ್ರದತ್ತನು ಆಶ್ಚರ್ಯ ಪಡುತ್ತ ಸಮರಸೇನನನ್ನು ಅನುಮಾನದಿಂದ ಅದೇನು ಹೇಳುವನೋ ಎಂದು ನೋಡಿದನು.

" ಆ ಶಾಕ್ತೇಯನ ತ್ರಿಶೂಲವು ಈ ನಿಮಿಷದಲ್ಲಿ ಶಿವದತ್ತನ ಕೈಗೆ ಸಿಗುವ ಹಾಗಿದೆ ಗೊತ್ತೋ ? ಮಹಾ ದುಡುಕುಗಾರ ನೀನು !" ಎಂದನು ಸಮರಸೇನ.

" ಸಾಧ್ಯವಿಲ್ಲ. ಶಿವದತ್ತನಿಗೆ ಈ ಶಿಥಿಲ ನಗರದಲ್ಲಿ ಆ ತ್ರಿಶೂಲವಿರುವುದೆಂದು ಗೊತ್ತಿದ್ದರೂ, ಅದು ಅಡಗಿರುವ ಪ್ರತ್ಯೇಕ ಸ್ಥಳವು ಯಾವುದೆಂದು ತಿಳಿಯದು. ತಿಳಿಯಲು ಸಾಧ್ಯವೂ ಇಲ್ಲ. ಅದಿರುವ ಜಾಗದ ಗುರುತಿನ ಪಟವು ನನ್ನ ಕೈಯಲ್ಲಿದೆ. ಆನೆಗಳ ವನದ ವಿಷ ವೃಕ್ಷವೆಂದ ಮಾತ್ರಕ್ಕೆ, ಪಟದ ಗುರುತುಗಳ ಸಹಾಯವಿಲ್ಲದೆ ಯಾರೂ ಅದನ್ನು ಹುಡುಕಿ ಎತ್ತಿಕೊಳ್ಳುವಂತಿಲ್ಲ. ಅದಕ್ಕೆ ಸಂಬಂಧಿಸಿದ ಪಟವು

"ಇದೊಂದೇ ಇರುವುದು ಪ್ರಪಂಚದಲ್ಲಿ" ಎಂದನು ವ್ಯಾಘ್ರದತ್ತ ಧೈರ್ಯದಿಂದ.

ಆ ಮರುಕ್ಷಣದಲ್ಲೇ ಸುತ್ತುಮುತ್ತಲಿನ ಪ್ರದೇಶವು ಮಾರ್ಮೊಳಗುವಂತೆ, ಏಕಾಕ್ಷಿ ಮಾಂತ್ರಿಕನ ಗೂಢಚಾರಿ ಕಪಾಲನ ಕರ್ಕಶ ಸ್ವರವು ಕೇಳಿಸಿತು.

ಆ ಶಬ್ದ ಕೇಳಿದ ಕೂಡಲೇ ಸಮರಸೇನನು ಬೆಚ್ಚಿ ಬಿದ್ದವನಂತೆ ಹಾರಿ ಎದ್ದು, "ಅಯ್ಯೋ ! ಸರ್ವನಾಶವೇ ಬಂತು. ಇದು ಮಹಾಮಾಂತ್ರಿಕ ಚತುರ್ನೇತ್ರನ ಬಂಟ ಕಪಾಲನ ಧ್ವನಿ ! ನೀವೆಲ್ಲಾ ಬೇಗನೇ ಓಡಿ ಹೋಗಿ ಯಾವ ಗುಹೆಯಲ್ಲಾದರೂ ತಲೆ ಮರೆಸಿಕೊಳ್ಳಿ ! ಅವನ ಕೊಳ್ಳೀ ಕಣ್ಣಿಗೆ ಬಿದ್ದರೆ ತೀರೇ ಹೋಯಿತು! ಬೇಗ !ಬೇಗ !" ಎಂದನು ಸಮರಸೇನ.

ವ್ಯಾಘ್ರದತ್ತನು ಅನುಮಾನದಿಂದ ಅವನನ್ನು ನೋಡಿ, "ಚತುರ್ನೇತ್ರನು ನಿನ್ನ ಸ್ನೇಹಿತನೆಂದು ಹೇಳಿದೆಯಲ್ಲಾ ? ಹಾಗಿರುವಾಗ ಅವನಿಂದ ನಮಗೇನು ಭಯಬಂದೀತು ? ಏಕೆ ಹೀಗೆ ಹೆದರಿ ಚಡಪಡಿಸುವೆ ? ಹೆದರಿ ಓಡುವ ಅಗತ್ಯ ವೇನಿದೆ ? " ಎಂದು ಕೇಳಿದನು.

ಇನ್ನು ಇವನಿಗೆ ಉತ್ತರ ಕೊಡುತ್ತ ತಡ ಮಾಡಿದರೆ ತನಗೆ ಅಪಾಯ ಬರುತ್ತದೆಂದುಕೊಂಡನು ಸಮರಸೇನ. ಈ ಕಪಾಲನು ಏಕಾಕ್ಷಿ ಮಾಂತ್ರಿಕನ ಬಂಟನೆಂದು ಅವನಿಗೆ ಗೊತ್ತು. ಮಹಾ ಮಾಂತ್ರಿಕನಾದ ಚತುರ್ನೇತ್ರನಿಗೆ ಶತ್ರುವಾಗಿ ಏಕಾಕ್ಷಿ ಮಾಂತ್ರಿಕನೊಬ್ಬನಿರುವನೆಂದು ವ್ಯಾಘ್ರದತ್ತನಿಗೆ ತಿಳಿಯುವುದು ಒಳ್ಳೆಯದಲ್ಲವೆಂದುಕೊಂಡೇ ಸಮರ ಸೇನನು ಆ ವಿಧವಾಗಿ ವ್ಯಾಘ್ರದತ್ತನೊಂದಿಗೆ ಸುಳ್ಳು ಹೇಳಿದ್ದನು. ಈ ಬಿಸಿಯಲ್ಲೇ ವ್ಯಾಘ್ರದತ್ತನನ್ನು ಹದಬರಿಸಿ ಬಿಡಬೇಕೆಂದುಕೊಂಡನು.

"ವ್ಯಾಘ್ರದತ್ತಾ ! ಹೀಗೆಲ್ಲಾ ಕೇಳುತ್ತಾ ಹೊತ್ತು ಕಳೆಯಬೇಡ. ನನ್ನ ಜತೆಯಲ್ಲಿ ನೀನು ಚತುರ್ನೇತ್ರನ ಕಣ್ಣಿಗೆ ಬೀಳುವುದು ಕ್ಷೇಮವಲ್ಲ. ಅವನು ದುಡುಕಿ




ನಿನ್ನನ್ನು ಹಾರಿಸಿ ಬಿಡಲಾರನೆಂದು ಏನು ನಂಬುಗೆ? ಮೊದಲು ನಾನು ಅವನ ಹತ್ತಿರ ಮಾತಾಡಿದ ಮೇಲೆ ನಿನಗೆ ಅವನೊಂದಿಗೆ ಪರಿಚಯಮಾಡಿಸುತ್ತೇನೆ. ಇದೆಲ್ಲಾ ನಿಮ್ಮೆಲ್ಲರ ಒಳಿತಿಗಾಗಿಯೇ ಹೇಳುತ್ತಿದ್ದೇನೆ. ಮೊದಲು ನೀವೆಲ್ಲ ಓಡಿಹೋಗಿ ಯಾವ ಗುಹೆ ಯೊಳಗಾದರೂ ಅಡಗಿಕೊಳ್ಳಿರಿ" ಎಂದು ಸಮರ ಸೇನನು ಅವಸರಪಡಿಸಿದನು.

ಸಮರಸೇನನು ಮಾತಾಡುತ್ತಿದ್ದಾಗಲೇ "ಹೇ ! ಕಾಪಾಲಾ ! ಕಾಲಭುಜಂಗಾ !" ಎಂಬ ಏಕಾಕ್ಷೀ ಮಾಂತ್ರಿಕನ ಕಂಠ ಸ್ವರವು ಭಯಂಕರವಾಗಿ ಮೊಳಗಿತು. ಆ ಧ್ವನಿಯನ್ನು ಕೇಳಿ ಬೆರಗಾದ ವ್ಯಾಘ್ರದತ್ತನೂ ಅವನ ಭಟರೂ ಅಲ್ಲಿಂದ ಒಮ್ಮೆಗೇ ಓಡ ತೊಡಗಿದರು. ಅದೇ ಸಂಧಿಯಲ್ಲಿ ಸಮರಸೇನನೂ ಕೂಡಾ ಮತ್ತೊಂದು ದಿಕ್ಕಿಗೆ ಓಡಿದನು.

ಸ್ವಲ್ಪ ದೂರ ಓಡಿ ಹಿಂದಿರುಗಿ ನೋಡಿದ ವ್ಯಾಘ್ರದತ್ತನಿಗೆ ಸಮರಸೇನನು ತಮ್ಮೊಂದಿಗೆ ಬಾರದೆ

ಅಲ್ಲಿಯೂ ನಿಲ್ಲದೆ ಎತ್ತಲೋ ಓಡುವುದನ್ನು ನೋಡಿ ಅನುಮಾನವಾಯಿತು. ತನ್ನ ಸ್ನೇಹಿತನೆಂದು ಹೇಳಿದ ಚತುರ್ನೇತ್ರನ ಶಬ್ದ ಕೇಳಿ ಅವನೇಕೆ ಹಾಗೆ ಹೆದರಿ ಓಡುತ್ತಾನೆ ? ಹಾಗಾದರೆ ಅವನು ಹೇಳಿದ್ದೆಲ್ಲವೂ ಸುಳ್ಳೇ. ಇದರಲ್ಲೇನೋ ಮೋಸವಿರಬೇಕು. ಸಮರಸೇನನು ದೊಡ್ಡ ಸುಳ್ಳುಗಾರನೆಂದು ವ್ಯಾಘ್ರದತ್ತನು ಅಂದುಕೊಂಡು ಹಲ್ಲು ಕಡಿದನು.

ಅಷ್ಟರಲ್ಲೇ ಅತ್ತ ಬಂದ ಏಕಾಕ್ಷಿ ಮಾಂತ್ರಿಕನು ವ್ಯಾಘ್ರದತ್ತನನ್ನು ನೋಡಿ ಬಿಟ್ಟನು. ಅವನು ಹಲ್ಲು ಕಡಿಯುತ್ತ, ಕಣ್ಣು ತಿರುಗಿ ಸುತ್ತ, "ಯಾರವನು ? ಏನಿದು ? ಲೋ ! ಕಾಲಭುಜಂಗಾ ! ಕಪಾಲಾ ! ಆ ಚತುರ್ನೇತ್ರನ ಭೃತ್ಯರನ್ನು ಬಿಡಬೇಡೀ ! ಸುತ್ತು ಮುತ್ತಿರಿ ! ಇವರನ್ನೆಲ್ಲ ನೆತ್ತಿಯಿಂದ ಸೀಳುತ್ತೇನೆ ! ಹೇ ! ಧೂರ್ತರೇ ! ನಿಲ್ಲಿರಲ್ಲೇ !" ಎಂದು ಭೀಕರವಾಗಿ ಕೂಗಿದನು.

ಇವನು ಚತುರ್ನೇತ್ರನಲ್ಲವೆಂದು ವ್ಯಾಘ್ರದತ್ತನಿಗೆ ಕೂಡಲೇ ಗೊತ್ತಾಯಿತು. ಇವನು ಸಮರಸೇನನ ಸ್ನೇಹಿತನಲ್ಲ. ಅದಕ್ಕೇ ತನ್ನನ್ನು ಮೋಸದಿಂದ ಇವನ ಹಿಡಿತಕ್ಕೆ ಸಿಕ್ಕಿಸಿ ಅವನು ತಪ್ಪಿಸಿಕೊಂಡಿದ್ದಾನೆ. ಈಗ ತಾನೇನು ಮಾಡಬೇಕು ? ಈ ಮಾಂತ್ರಿಕನು ಅಂದುಕೊಂಡ ಹಾಗೆ ತಾನು ಚತುರ್ನೇತ್ರನ ಅನುಚರನಲ್ಲವೆಂದೂ ಅವನ ಶತ್ರು ಪಕ್ಷದವನೆಂದೂ ಹೇಳಿ ನಂಬಿಸಬೇಕು. ಇವನಿಗೆ ಚತುರ್ನೇತ್ರನು ಪರಮ ಶತ್ರುವೆಂದು ತಿಳಿಯುತ್ತದೆ. ಅದಕ್ಕೆ ತಕ್ಕಂತೆ ಮಾತಾಡದೆ ಬೇರೆ ದಾರಿ ಇಲ್ಲ.

ಏಕಾಕ್ಷಿಯ ಆಜ್ಞೆಯನ್ನು ಕೇಳಿದ ಕೂಡಲೇ ಅವನ ಬಂಟತನ ಮಾಡುವ ಕಪಾಲವೂ, ಕಾಲಭುಜಂಗವೂ ವ್ಯಾಘ್ರದತ್ತನನ್ನೂ, ಅವನ ಭಟರನ್ನೂ ಚಲಿಸಲು ಬಿಡದೆ ಮುತ್ತಿ,ಸುತ್ತ ತೊಡಗಿದುವು.ಕಾಲಭುಜಂಗವೂ ಕೋರೆ ಹಲ್ಲುಗಳನ್ನು ಚಾಚಿ ಭುಸುಗುಡುತ್ತ ಅವರ




ಸುತ್ತಲೂ ತಿರುಗುತಿತ್ತು. ಕಪಾಲವು ಕಿರಿಚಿಕೊಂಡು ಅವರ ತಲೆಗಳ ಮೇಲೆ ಹಾರುತ್ತ ಇಳಿಯುತ್ತ ಕುಟ್ಟುತ್ತ ಸುತ್ತುತಿತ್ತು. ಅದರ ಕಾಟದಿಂದ ಎಲ್ಲರೂ ನಿಂತಲ್ಲೇ ಹಾರಿ ಬೀಳುತ್ತ ಕಿರುಚುತ್ತಿದ್ದರು.

ಏಕಾಕ್ಷಿ ಗಹಗಹಿಸಿ ನಗುತ್ತ ಅವರ ಸಮೀಪಕ್ಕೆ ಬಂದನು. ವ್ಯಾಘ್ರದತ್ತ ಮೊದಲಾದವರನ್ನು ಸರಿಯಾಗಿ ನೋಡುವಾಗ ಅವನ ನಗು ನಿಂತಿತು. ಸಮರಸೇನನೂ, ಅವನ ಕಡೆಯ ಸೈನಿಕರೂ ಇವರಲ್ಲವೆಂದು ತಿಳಿದು, ಆಶ್ಚರ್ಯದಿಂದ ಪ್ರಶ್ನಾರ್ಥಕವಾಗಿ ಅವನ ಹುಬ್ಬುಗಳು ಮೇಲೇರಿದುವು.

"ಯಾರು ನೀವೆಲ್ಲ ? ನಾನು ಅಂದುಕೊಂಡ ದುಷ್ಟನ ಕಡೆಯವರು ನೀವಲ್ಲವೆಂದು ಕಾಣುತ್ತದೆ. ಹಾಗಾದರೆ ಕುಂಭಾಂಡನ ಕಡೆಯವರೇನು ? " ಎಂದು ಏಕಾಕ್ಷಿ ವ್ಯಾಘ್ರದತ್ತನನ್ನು ಕೇಳಿದನು.

"ನನ್ನ ಹೆಸರು ವ್ಯಾಘ್ರದತ್ತನೆಂದು. ನಾನು ಈ ವ್ಯಾಘ್ರಮಂಡಲದ ರಾಜ. ನೀವು ಹೇಳಿದ

ಕುಂಭಾಂಡನು ಯಾರೆಂದು ನಮಗೆ ಗೊತ್ತಿಲ್ಲ" ಎಂದನು ವಿನಯದಿಂದ ವ್ಯಾಘ್ರದತ್ತ.

"ಹಾಗಾದರೆ ನೀನು ಈ ಸಾವಿನಕಣಿವೆಗೆ ಹೊರಗಿನಿಂದ ಬಂದವನಲ್ಲವೆಂದು ಕಾಣುತ್ತದೆ." ಎಂದನು ಏಕಾಕ್ಷಿಮಾಂತ್ರಿಕ.

"ನೀವು ಹೇಳಿದ ಸಾವಿನಕಣಿವೆ ಎಲ್ಲಿದೆ ಎಂದೂ ನನಗೆ ಗೊತ್ತಿಲ್ಲ. ಬಹುಶಃ ಅದಕ್ಕೆ ನಾವು ಮತ್ತೊಂದು ಹೆಸರಿಟ್ಟು ವ್ಯವಹರಿಸುತ್ತೇವೋ ಏನೋ ?" ಎಂದನು ವ್ಯಾಘ್ರದತ್ತ.

"ಹಾಗಾದರೆ ನಿನಗೆ ಸಮರಸೇನ ಎಂಬ ಹೆಸರುಳ್ಳವನು ಗೊತ್ತಿದೆಯೆ ?" ಎಂದು ಏಕಾಕ್ಷಿ ಪ್ರಶ್ನಿಸಿದನು.

ಈ ಪ್ರಶ್ನೆಯನ್ನು ಕೇಳಿ ವ್ಯಾಘ್ರದತ್ತನಿಗೆ ಪರಿಸ್ಥಿತಿ ಸುಮಾರಾಗಿ ಅರ್ಥವಾಯಿತು. ಈ ಮಾಂತ್ರಿಕನು ಸಮರಸೇನನಿಗೆ ಪ್ರಬಲ ವಿರೋಧಿಯಾಗಿದ್ದಾನೆ. ಈಗ ಸಮರಸೇನನ ಮೇಲೆ ಹಗೆ ತೀರಿಸಿಕೊಳ್ಳಲಿಕ್ಕೆ ತನಗೆ ಸಂದರ್ಭ ಬಂದಿದೆ. ಇದನ್ನು ಕಳೆದುಕೊಳ್ಳಬಾರದು ಎಂದು ವ್ಯಾಘ್ರದತ್ತನಿಗೆ ತೋರಿತು.

"ಮಹಾಮಹಿಮರಾದ ಮಾಂತ್ರಿಕ ಶ್ರೇಷ್ಠರೇ ! ಸಮರಸೇನನೆಂಬವನು, ಇದೇ ಸ್ವಲ್ಪ ಹೊತ್ತಿನ ಮೊದಲು ನನ್ನ ಕೈಯಿಂದ ತಪ್ಪಿಸಿಕೊಂಡು ಓಡಿ ಹೋಗಿ ಬಿಟ್ಟ. ಅವನು ನನ್ನ ಬದ್ಧ ವಿರೋಧಿ. ನಾನು ಅವನನ್ನು ಬಂದಿಯಾಗಿ ಹಿಡಿದೆನು ಕೂಡ. ನಾನು ಸ್ವಲ್ಪ ಅಲಕ್ಷ್ಯವಾಗಿರುವ ಸಂಧಿ ಸಾಧಿಸಿ ತಪ್ಪಿಸಿಕೊಂಡು ಓಡಿ ಬಿಟ್ಟ !" ಎಂದನು ವ್ಯಾಘ್ರದತ್ತ.

ವ್ಯಾಘ್ರದತ್ತನು ಹೇಳುವುದನ್ನು ಕೇಳುತ್ತಿದ್ದಂತೆ ಏಕಾಕ್ಷಿಗೂ ಪರಿಸ್ಥಿತಿ ಅರ್ಥವಾಗ ತೊಡಗಿತು. ಸಮರಸೇನನನ್ನು ಹುಡುಕಿ ಹಿಡಿಯುವ ಕಾರ್ಯದಲ್ಲಿ ವ್ಯಾಘ್ರದತ್ತನು ಸಹಾಯಮಾಡಬಲ್ಲನೆಂದು ಅವನಿಗೆ ತೋರಿತು. ಆದರೆ ದುಡುಕಿ ನಂಬ ಬಾರದು. ಸಮರಸೇನನಿಗೂ ವ್ಯಾಘ್ರದತ್ತನಿಗೂ ವಿರೋಧಉಂಟಾಗಲು ಕಾರಣವೇನೆಂಬುದನ್ನು ಮೊದಲು ತಿಳಿಯಬೇಕೆಂದುಕೊಂಡನು.

"ನಿನಗೂ ಆ ಸಮರಸೇನನಿಗೂ ಏನು ಸಂಬಂಧ? ನಿಮ್ಮೊಳಗೆ ವಿರೋಧ ಉಂಟಾಗಲು ಕಾರಣವೇನು ? ಅವನು ನಿನಗೆ ಬಂದಿಯಾಗಿ ಸಿಕ್ಕಿ, ಹೇಗೆ ತಪ್ಪಿಸಿಕೊಂಡು ಹೋಗಲು ಸಾಧ್ಯವಾಯಿತು ? ಅದನ್ನೆಲ್ಲ ಸ್ವಲ್ಪ ವಿವರಿಸಿ ಹೇಳು ನೋಡುವಾ" ಎಂದನು ಏಕಾಕ್ಷಿಮಾಂತ್ರಿಕ.

"ಮಹಾಮಾಂತ್ರಿಕರಾದ ನಿಮಗೆ ಗೊತ್ತಿಲ್ಲದ್ದೇನಿದೆ? ತಾವು ಸರ್ವಜ್ಞರು. ಹೊಸತಾಗಿ ನಾನು ಏನು ತಾನೇ ಹೇಳಲಿ ?" ಎಂದು ವ್ಯಾಘ್ರದತ್ತನು ಏಕಾಕ್ಷಿಯ ಮುಂದೆ ಎರಡು ಕೈಗಳನ್ನೂ ಜೋಡಿಸಿ ನಮಸ್ಕಾರ ಮಾಡಿದನು.

—(ಮುಂದಿನ ಸಂಚಿಕೆಯಲ್ಲಿ ಮುಕ್ತಾಯ)






## ೧೮

[ಶಿಥಿಲ ನಗರದಿಂದ ಓಡಿಹೋಗುವ ವ್ಯಾಘ್ರದತ್ತ ಮತ್ತು ಸಮರಸೇನನಿಗೆ ಏಕಾಕ್ಷಿ ಮಾಂತ್ರಿಕನು ಇದಿರಾದನು. ಆಗ ಸಮರಸೇನನು ಸಮಯಸ್ಫೂರ್ತಿಯಿಂದ ವ್ಯಾಘ್ರದತ್ತನನ್ನು ಮೋಸಪಡಿಸಿ ತಾನು ತಪ್ಪಿಸಿಕೊಂಡನು. ತನ್ನ ವಿರೋಧಿಯಾದ ಸಮರಸೇನನನ್ನು ಹತಗೊಳಿಸಲು ವ್ಯಾಘ್ರದತ್ತನ ಸಹಾಯ ಬೇಕೆಂದು ಧೂರ್ತನಾದ ಏಕಾಕ್ಷಿ ಮಾಂತ್ರಿಕನಿಗೆ ತೋರಿತು.]

ವ್ಯಾಘ್ರದತ್ತನು ಹೇಳಿದ ಮಾತುಗಳಿಂದ ಏಕಾಕ್ಷಿ ಮಾಂತ್ರಿಕನಿಗೆ ಆಗುವ ಹೋಗುವ ಪರಿಸ್ಥಿತಿ ಪೂರಾ ಅರ್ಥವಾಯಿತು. ತನ್ನ ಹಾಗೆಯೇ ವ್ಯಾಘ್ರದತ್ತನೂ ಸಮುದ್ರದಲ್ಲಿ ಧನರಾಶಿಗಳಿಂದ ತುಂಬಿರುವ ನಾವೆಯನ್ನು ವಶಪಡಿಸುವ ಪ್ರಯತ್ನದಲ್ಲಿರುವನೆಂದು ತಿಳಿದುಕೊಂಡನು. ಹಾಗಿರುವಾಗ ತಾವಿಬ್ಬರೂ ಒಂದಾಗುವುದರಿಂದ ಚತುರ್ನೇತ್ರನನ್ನೂ, ಅವನ ಸ್ನೇಹಿತನಾದ ಸಮರಸೇನನನ್ನೂ ಹತಮಾಡಲು ಅನುಕೂಲವಾದ ಬಲದ ಸಹಾಯ ತನಗೆ ಸಿಕ್ಕಿದಂತಾಯಿತೆಂದು ಏಕಾಕ್ಷಿಮಾಂತ್ರಿಕನಿಗೆ ತೋರಿತು.

"ಸರಿಸರಿ, ನನಗೆಲ್ಲಾ ಗೊತ್ತಾಯಿತು. ಆದರೆ ನಮ್ಮ ಗುರಿಯಾಗಿರುವ ಧನರಾಶಿಯ ನಾವೆಯನ್ನು ವಶಪಡಿಸಿಕೊಳ್ಳಲು ಮಾನವಮಾತ್ರರಿಗೆ ಸಾಧ್ಯವಲ್ಲ ಎಂಬ ಸಂಗತಿ ನಿನಗೆ ಗೊತ್ತಿಲ್ಲವೆಂದು ಕಾಣುತ್ತದೆ. ನೀನು ಯಾವ ನಂಬುಗೆಯ ಆಧಾರಿಂದ ಈ ಸಾಹಸಕ್ಕೆ ಇಳಿದಿರುವಿ?" ಎಂದು ಪ್ರಶ್ನೆ ಮಾಡಿದನು ಏಕಾಕ್ಷಿ.

ಅದಕ್ಕೆ ವ್ಯಾಘ್ರದತ್ತನು ತಲೆಯಾಡಿಸುತ್ತ, "ಶಾಕ್ತೇಯನ ಮಹಾ ತ್ರಿಶೂಲವಿದೆಯಷ್ಟೆ? ಅದೊಂದಿದ್ದರೆ ಸಾಕಲ್ಲಾ?" ಎಂದನು.



ಶಾಕ್ತೇಯನ ಮಹಾ ತ್ರಿಶೂಲದ ಹೆಸರು ಕೇಳಿದ ಕೂಡಲೇ ಏಕಾಕ್ಷಿ ಮಾಂತ್ರಿಕನಿಗೆ ನಿಶ್ಚೇಷ್ಟತೆ ಬಡಿದಂತಾಯಿತು. ತನಗೂ ಚತುರ್ನೇತ್ರನಿಗೂ ಮಾತ್ರವೇ ಆ ತ್ರಿಶೂಲದ ರಹಸ್ಯ ತಿಳಿದಿರುವುದೆಂದು ನಂಬಿದುದು ತಪ್ಪಾಯಿತೆನಿಸಿತು.

ಆಗ ಮಾಂತ್ರಿಕನ ಮುಂದೆ ಭೀತನಾಗಿದ್ದ ವ್ಯಾಘ್ರದತ್ತನು, ಆ ತ್ರಿಶೂಲವು ಆನೆಗಳ ವನದಲ್ಲಿ ಗುರುದ್ರೋಹಿಯ ಅಸ್ಥಿಪಂಜರದಲ್ಲಿರುವುದೆಂದೂ, ಶಿವದತ್ತನು ಕೂಡಾ ಅದಕ್ಕಾಗಿ ಪ್ರಯತ್ನಿಸುತ್ತಿರುವನೆಂದೂ, ಸಮರಸೇನನೂ ಸಹಾ ಅಲ್ಲಿಗೇ ಹೋಗಿರಬಹುದೆಂದೂ ಹೇಳಿಬಿಟ್ಟನು. ಅದನ್ನೆಲ್ಲ ಕೇಳಿ ಏಕಾಕ್ಷಿ ಮಾಂತ್ರಿಕನು ಕೋಪದಿಂದ ನಡುಗಿದನು.

"ಹಾಗಾದರೆ, ವ್ಯಾಘ್ರದತ್ತಾ, ಈ ಕಾರ್ಯವನ್ನು ಸಾಧಿಸಲಿಕ್ಕೆ ನಾವಿಬ್ಬರೂ ಒಬ್ಬರಿಗೊಬ್ಬರು ಸಹಾಯಕರಾಗಿರಲೇ ಬೇಕಾಗಿದೆ. ಸಮರಸೇನನಿಗೆ ಚತುರ್ನೇತ್ರನೆಂಬ ಕ್ಷುದ್ರ ಮಾಂತ್ರಿಕನೊಬ್ಬ ಈ ಕಾರ್ಯಕ್ಕೆ ಸಹಾಯಮಾಡುವ ಹಾಗಿದೆ. ಆದುದರಿಂದ ಮುಂದಾಗಿ ನಾವು ಶಿಥಿಲನಗರವನ್ನು ಸೇರಿ ಶಾಕ್ತೇಯನ ತ್ರಿಶೂಲವನ್ನು ವಶಪಡಿಸಿಕೊಂಡು ಬಿಡಬೇಕು, ಅಲ್ಲಿಗೆ ನಡೆ, ಹೋಗೋಣ" ಎಂದನು ಏಕಾಕ್ಷಿ. ಅವರು ಸ್ವಲ್ಪ ದೂರ ಬೇಗಬೇಗನೇ ಹೋಗುತ್ತಿರಲು, ಏಕಾಕ್ಷಿ ತನ್ನ ಮಂತ್ರದ ಚಾರರನ್ನು ನೋಡಿ, "ಹೇ ! ಕಪಾಲಾ ! ಕಾಲಭುಜಂಗಾ ! ನೀವು ಮುಂದಾಗಿ ಹೋಗಿ ಆ ಸಮರಸೇನನನ್ನು ಹುಡುಕಬೇಕು. ಅವನು ಮುಂದೆಬಾರದ ಹಾಗೆ ತಡೆಯಬೇಕು !" ಎಂದು ಆಜ್ಞೆ ಮಾಡಿದನು.

"ಹಾಗೆಯೇ ಗುರೂ !" ಎಂದು ಅವೆರಡೂ ಹೊರಟುಹೋದುವು. ಮತ್ತೆ ಸ್ವಲ್ಪ ಹೊತ್ತಿಗೆಲ್ಲಾ ಏಕಾಕ್ಷಿಯೂ ವ್ಯಾಘ್ರದತ್ತನೂ ಬೆಚ್ಚರಬೀಳುವ ಹಾಗೆ ಕರಿಗೂಗೆಯ ಕರ್ಕಶ ಕಂಠಸ್ವರವು ಕೇಳಿಬಂದಿತು. "ಓ! ಚತುರ್ನೇತ್ರಾ ! ಏಕಾಕ್ಷಿ! ಏಕಾಕ್ಷಿ!" ಎಂದು ಆ ಕರಿ ಗೂಗೆ ಏಕಾಕ್ಷಿಯ ತಲೆಯಮೇಲೆಯೇ ಸುತ್ತುತ್ತಾ, ಒಂದೇಸಮನೆ ಅರಚ ತೊಡಗಿತು.

ಏಕಾಕ್ಷಿ ಮಾಂತ್ರಿಕನು ಹೆದರುವುದನ್ನು ನೋಡಿ ವ್ಯಾಘ್ರದತ್ತನೂ ಅಂಜಿಕೆಯಿಂದ ಜರ್ರನೆ ಇಳಿದುಹೋದನು. ಏಕಾಕ್ಷಿ ಕಂಪಿಸುವ ಸ್ವರದಿಂದ, "ಕಪಾಲಾ ! ಕಾಲಭುಜಂಗಾ ! ಇತ್ತ ಬನ್ರೋ !" ಎಂದು ಕೂಗ ತೊಡಗಿದನು.

ಆದರೆ ಏಕಾಕ್ಷಿ ಎಷ್ಟೇ ಕೂಗಿದರೂ ಅವನ ಚಾರಶಕ್ತಿಗಳು ಅಲ್ಲಿಗೆ ಬರಲೇ ಇಲ್ಲ. ಅವನು ಏನು ಮಾಡುವುದೆಂದು ಯೋಚಿಸುವಾಗ, ಕರಿ ಗೂಗೆ ಅಲ್ಲಿಂದ ದೂರಕ್ಕೆ ಹಾರಿಹೋಯಿತು. ಅದು ಚತುರ್ನೇತ್ರನನನ್ನು ಕರೆತರಲಿಕ್ಕೇ ಓಡಿರಬೇಕು.

"ನಡೆ ಹೋಗೋಣ" ಎಂದು ಏಕಾಕ್ಷಿ ಧೈರ್ಯದಿಂದ ಮುಂದಡಿ ತೆಗೆದನು, ವ್ಯಾಘ್ರದತ್ತನೂ ನಡೆದನು. ಸ್ವಲ್ಪಹೊತ್ತಿಗೆ ವ್ಯಾಘ್ರದತ್ತನು ಒಂದು ಸ್ಥಳದಲ್ಲಿ ನಿಂತು, "ಇದೇ ಆನೆಗಳ ವನ. ಹೆಡೆ

ಬಿಚ್ಚಿ ಭುಸುಗುಡುತ್ತಿರುವ ಹಾವುಗಳಂತಹ ಎಲೆ ತುಂಬಿದ ಈ ಮರವೇ ವಿಷವೃಕ್ಷ, ಅಲ್ಲಿ ಕಾಣುವ ಸಮಾಧಿಯ ಅಡಿಯಲ್ಲಿಯೇ ಶಾಕ್ತೇಯನ ತ್ರಿಶೂಲವಿದೆ " ಎಂದನು.

ಆ ಮಾತು ಕೇಳಿ ವಿಕಾಕ್ಷಿಗೆ ಆನಂದವೆದ್ದಿತು. "ಸರಿ. ವ್ಯಾಘ್ರದತ್ತಾ, ಅಕೋ ಅಲ್ಲಿ ಬರುವ ಶಿವದತ್ತನನ್ನು ನಿನ್ನ ಭಟರೊಂದಿಗೆ ಇದಿರಿಸು. ಇಷ್ಟರೊಳಗೆ ತ್ರಿಶೂಲವನ್ನು ಕೈಗೆತ್ತಿಕೊಳ್ಳುವ ಕೆಲಸ ನಾನು ಮಾಡುತ್ತೇನೆ. ನಿನ್ನ ಭಟರು ಶಿವದತ್ತನನ್ನು ಮುಂದೆಬಿಡದೆ ತಡೆಯಲಿ" ಎಂದು ವ್ಯಾಘ್ರದತ್ತನನ್ನು ಹುರಿದುಂಬಿಸಿದನು.

ವ್ಯಾಘ್ರದತ್ತನು ಹಿಂದೆ ಮುಂದೆ ನೋಡದೆ ಇರುವ ಕೆಲವಂದಿ ಭಟರೊಂದಿಗೆ ಶಿವದತ್ತನ ಅನುಚರರ ಕಡೆಗೆ ಧಾವಿಸಿದನು. ಶಿವದತ್ತನ ಕಡೆಯವರು ವ್ಯಾಘ್ರ ದತ್ತನ ಭಟರಿಗಿಂತ ಮೂರು ಪಾಲು ಹೆಚ್ಚಾಗಿದ್ದರು. ಆ ಕಾರಣದಿಂದ ವ್ಯಾಘ್ರದತ್ತನ ಭಟರು ಸಾವಿನ ಕೂಗು ತೆಗೆಯುತ್ತಾ ಬಡಬಡ ಬೀಳತೊಡಗಿದರು.

ಈ ಪರಿಸ್ಥಿತಿಯಲ್ಲಿ ತನಗೆ ಬರಲಿರುವ ಅಪಾಯವೇನೆಂದು ವಿಕಾಕ್ಷಿಗೆ ಗೊತ್ತಾಯಿತು. ಅವನು ಗಂಟಲು ಹರಿದುಹೋಗುವ ಹಾಗೆ ದೊಡ್ಡ ಸ್ವರದಿಂದ "ಕಪಾಲಾ ! ಕಾಲಭುಜಂಗಾ!" ಎಂದು ಕೂಗಿದನು. ಕೂಡಲೇ ಅವನ ಆ ಮಂತ್ರಚಾರಕ ಗಳು ಅಲ್ಲಿಗೆ ಬಂದುವು.

ಅವುಗಳನ್ನು ನೋಡಿದ ಕೂಡಲೇ ಶಿವದತ್ತನ ಭಟರು ಹೆದರಿಬಿದ್ದೆದ್ದು ಓಡಿ ಹೋಗ ತೊಡಗಿದರು. ಆಗ ವಿಕಾಕ್ಷಿ," ವ್ಯಾಘ್ರದತ್ತಾ ! ಇದೀಗ ನಮಗೆ ಒಳ್ಳೇ ಸಮಯ ! ಆ ಸಮಾಧಿಯನ್ನು ನಿನ್ನ ಭಟರಿಂದ ಬೇಗನೇ ಅಗೆಯಿಸು ! ಬೇಗ! ಬೇಗ!" ಎಂದು ಅವಸರಪಡಿಸಿದನು.

ವ್ಯಾಘ್ರದತ್ತನಿಗೂ ತನ್ನ ವಿಜಯವು ನಿಸ್ಸಂದೇಹ ವೆಂದು ಧೈರ್ಯಬಂತು. ಸಮರಸೇನನೂ ಚತುರ್ನೇತ್ರನೂ ಅಲ್ಲಿಗೆ ಬರುವುದರೊಳಗೆ ತಾನು ಆ ದಿವ್ಯಶಕ್ತಿಯ ತ್ರಿಶೂಲವನ್ನು ಕೈಗೆತ್ತಿಕೊಂಡರೆ ಮತ್ತೆ ಎಂಥಾ ಮಾಂತ್ರಿಕರೂ ಮಣ್ಣು ಮುಕ್ಕ





ಬೇಕಾದ್ದೇ ! ಅವನು ಅತ್ಯುತ್ಸಾಹದಿಂದ ತನ್ನ ಭಟರನ್ನು ಕರೆಯುತ್ತ, ಮುಂದೆ ಹೋಗಿ ಸಮಾಧಿಯನ್ನು ತಾನೇ ಅಗೆಯ ತೊಡಗಿದನು. ಆ ಸಮಯದಲ್ಲಿ ಅಲ್ಲಿಗೆ ನೂರು ಗಜ ದೂರದಲ್ಲಿರುವ ವಿಷವೃಕ್ಷದ ಕಡೆಯಿಂದ " ಹೂಂ ಹೂಂ " ಎಂದು ಮೂಲುಗು ದನಿ ಹೊರಡತೊಡಗಿತು. ಹಾವಿನ ಹೆಡೆಗಳಂತಿರುವ ಆ ಮರದ ಎಲೆಗಳು ಭುಸುಗುಟ್ಟ ತೊಡಗಿದುವು.

ಅದನ್ನು ನೋಡಿ ಏಕಾಕ್ಷಿ ಮಾಂತ್ರಿಕನು ಮಂತ್ರ ದಂಡವನ್ನು ತಿರುಗಿಸುತ್ತಾ ಆ ವಿಷವೃಕ್ಷದ ಕಡೆಗೆ ಹೋದನು. ಇನ್ನೊಂದು ಕೈಯಲ್ಲಿ ಕತ್ತಿಯನ್ನೆತ್ತಿಕೊಂಡು ಯಾವುದೋ ಮಂತ್ರವನ್ನು ಪಠಿಸ ತೊಡಗಿದನು. ಅಷ್ಟರಲ್ಲಿ ವ್ಯಾಘ್ರದತ್ತನ ಕಂಠದಿಂದ ಆರ್ತನಾದವು ಹೊರಡ ತೊಡಗಿತು. ಅದನ್ನು ಕೇಳಿ ಏಕಾಕ್ಷಿ ಬೆಚ್ಚಿಬಿದ್ದು ಹಿಂದಿರುಗಿ ನೋಡಿದನು. ಚತುರ್ನೇತ್ರನ ಚಾಕರವಾದ ನರವಾನರವು ವ್ಯಾಘ್ರದತ್ತನನ್ನು ಕೈಗಳಲ್ಲಿ ಬಂಧಿಸಿ ಗಿರಿಗಿರಿ ತಿರಿಗಿಸಿಕೊಂಡಿದ್ದಿತು. ಕರಿಗೂಗೆ "ಏಕಾಕ್ಷಿ ! ಏಕಾಕ್ಷಿ !" ಎನ್ನುತ್ತ ವಿಷವೃಕ್ಷದ ಕಡೆಗೆ ಬರುತ್ತಿತ್ತು.

ಇದನ್ನು ನೋಡಿ ಏಕಾಕ್ಷಿ ಹೆದರಿ ಕೈ ಕಾಲು ಗೆಟ್ಟನು. ತಾನು ಶಾಕ್ತೇಯನ ತ್ರಿಶೂಲವನ್ನು ಹುಡುಕಿ ಹಿಡಿಯುವುದಕ್ಕೆ ಮೊದಲೇ, ಚತುರ್ನೇತ್ರನೂ ಸೈನಿಕರೊಂದಿಗೆ ಸಮರಸೇನನೂ ಅಲ್ಲಿಗೆ ಬರುವರೇನೋ ಎಂದು ಅವನಿಗೆ ಭಯವಾಯಿತು. ಅವನು ಕಾಲಭುಜಂಗವನ್ನು ಕರೆದು ನರವಾನರವನ್ನು ಓಡಿಸಲು ಆಜ್ಞೆ ಮಾಡಿದನು. ತನ್ನ ಕಡೆಗೆ ಬರುವ ಕಾಲಭುಜಂಗವನ್ನು ನೋಡಿ ನರವಾನರವು ವ್ಯಾಘ್ರದತ್ತನನ್ನು ದೂರದಲ್ಲಿರುವ ಕಲ್ಲು ದಿಣ್ಣೆಗಳ ಮೇಲಕ್ಕೆ ಬಿಸುಟು ಕಾಲಭುಜಂಗದ ಮೇಲೆ ಬಿದ್ದಿತು. ಅವೆರಡೂ ಹೋರಾಡುವಾಗ, ಆಕಾಶದಲ್ಲಿ ಕರಿಗೂಗೆಯೂ ಕಪಾಲವೂ ಒಂದರೊಡನೊಂದು ಗುದ್ದಿಕೊಳ್ಳುತ್ತಿದ್ದುವು. ನರವಾನರದಿಂದ ಕಲ್ಲುಗಳ ಮೇಲೆ ಬಿದ್ದ ವ್ಯಾಘ್ರದತ್ತನು ನಾಲ್ಕಾರು ಸಾಯುವ ಆರ್ತಧ್ವನಿ ತೆಗೆದು ನಿಃಶಬ್ದನಾದನು.

ಏಕಾಕ್ಷಿ ಮಾಂತ್ರಿಕನು ಹೆದರಿದ ಹಾಗೆಯೇ ಆಯಿತು. ಚತುರ್ನೇತ್ರನು ಗಂಭೀರಕಂಠದಲ್ಲಿ "ಭಲೇ ನರವಾನರಾ ! ಭಲೇ ಉಲೂಕಾ !" ಎಂದು ಕೂಗಿ ಹೇಳುತ್ತಾ ಅಲ್ಲಿಗೆ ಬಂದೇ ಬಂದನು. ಸಮರಸೇನನೂ ಕೆಲಮಂದಿ ಸೈನಿಕರೂ ಅವನೊಂದಿಗಿದ್ದರು. ಓಡಿ ಹೋಗಲು ನೋಡಿದ ಶಿವದತ್ತನೂ, ಅವನ ಅನುಚರನೂ ತಮ್ಮ ಕಡೆಗೆ ಸಹಾಯಕರು ಬಂದರೆಂಬ ಹೊಸ ಉತ್ಸಾಹದಿಂದ ಆ ಪ್ರದೇಶಕ್ಕೆ ತಿರುಗಿ ಬರುತ್ತಿದ್ದರು. ಅಳಿದುಳಿದ ವ್ಯಾಘ್ರದತ್ತನ ಭಟರು ಇದಿರಿಸಿ ತಡೆಯಲು ಪ್ರಯತ್ನಿಸುತ್ತಿದ್ದರು.

ನರವಾನರವು ಕಾಲಭುಜಂಗದ ವಿಷದ ಕೋರೆಗಳಿಂದ ತಪ್ಪಿಸಿಕೊಳ್ಳುತ್ತಾ ಅದನ್ನು ದೊಡ್ಡದೊಂದು

ಕಲ್ಲಿನ ಗದೆಯಿಂದ ಹೊಡೆಯುತ್ತಿದ್ದಿತು. ಕರಿಗೂಗೆ ಕೂಡಾ ಮಂತ್ರಕಪಾಲದ ಬೊಚ್ಚುಬಾಯಿಗೆ ಸಿಕ್ಕದೆ ತಪ್ಪಿಸಿಕೊಳ್ಳುತ್ತಾ, ಕಾಲಿನಿಂದ ಅದನ್ನು ಒದೆಯುತ್ತಾ, ಮೂಗಿನಿಂದ ತಿವಿಯುತ್ತಾ ಸಾಕುಸಾಕೆನಿಸುವಂತೆ ಹೋರಾಡುತ್ತಿದ್ದಿತು.

ಈಗ ತನ್ನ ಪರಿಸ್ಥಿತಿ ಗಂಡಾಂತರಕ್ಕೆ ಬಿತ್ತೆಂದು ತಿಳಿದ ಏಕಾಕ್ಷಿ ಮಾಂತ್ರಿಕನು ಕತ್ತಿಯನ್ನು ಹಿರಿದು ಗರ್ಜಿಸುತ್ತಾ, ಚತುರ್ನೇತ್ರನ ಮೇಲೆ ಹಾರಿಬಂದನು. ಚತುರ್ನೇತ್ರನು ಸ್ವಲ್ಪವೂ ಹಿಂಜರಿಯದೆ ಅವನನ್ನು ಇದಿರಿಸಿ ಹೊಡೆದನು. ಆ ಸಮಯದಲ್ಲಿ ಚತುರ್ನೇತ್ರನು ಹೇಳಿದಂತೆ ಸಮರಸೇನನು ಸೈನಿಕರ ಸಹಾಯದೊಂದಿಗೆ ಸಮಾಧಿಯನ್ನು ಅಗೆಯುವ ಕೆಲಸಕ್ಕೆ ತೊಡಗಿಬಿಟ್ಟನು.

ಈ ಮೊದಲೇ ವ್ಯಾಘ್ರದತ್ತನಿಂದ ಸ್ವಲ್ಪ ಅಗೆಯಲ್ಪಟ್ಟಿದ್ದ ಆ ಸಮಾಧಿ ಇನ್ನಿಷ್ಟು ಅಗೆಯಲ್ಪಟ್ಟಂತೆ ಸಮಾಧಿಯೊಳಗಿನಿಂದ ವಿಚಿತ್ರವಾದ ಕೂಗು, ವಿಕೃತವಾದ ನಗುವಿನ ಶಬ್ದಗಳು ಹೊರಡ ತೊಡಗಿದುವು.

ಸಮರಸೇನನು ಸ್ವಲ್ಪವೂ ಹೆದರಲಿಲ್ಲ. ತಮ್ಮ ನಾಯಕನ ಎದೆಗಾರಿಕೆಯನ್ನು ನೋಡಿದ ಸೈನಿಕರು ಕೂಡಾ ನಿರ್ಭಯವಾಗಿ ಸಮಾಧಿಯನ್ನು ಅಡಿಯ ವರೆಗೂ ಅಗೆದು ಹಾಕಿದರು.

ಸಮಾಧಿಯ ತಳದಲ್ಲಿ ಒಂದೇ ಒಂದು ಅಸ್ಥಿ ಪಂಜರವು ಕಂಡು ಬಂತು. ಅದು ಗುರುದ್ರೋಹಿ ಶಿಷ್ಯನ ಅಸ್ಥಿಪಂಜರವೆಂದು ಸಮರಸೇನನಿಗೆ ಗೊತ್ತಾಯಿತು. ಆ ಅಸ್ಥಿಪಂಜರದ ಗುಂಡಿಗೆಗೆ ಚುಚ್ಚಿಕೊಂಡಿತ್ತು ಶಾಕ್ತೇಯನ ಮಹತ್ವದ ತ್ರಿಶೂಲ. ಸಮರಸೇನನು ನಡುಗುವ ಕೈಗಳಿಂದ ಆ ತ್ರಿಶೂಲವನ್ನು ಹಿಡಿದು ಹೊರಕ್ಕೆ ಎಳೆದನು. ಆಗ ಅಸ್ಥಿಪಂಜರವು ಕರ್ಕಶವಾಗಿ ಅರಚಿತು, ಮರುಕ್ಷಣದಲ್ಲಿ ಅಸ್ಥಿಪಂಜರವು ಆಕಾಶದ ಮೇಲಕ್ಕೆ




ಹಾರುತ್ತಾ, "ಗುರೋ ಶಾಕ್ತೇಯಾ ! ಇಂದಿಗೆ ನನ್ನ ಪಾಪದ ಶಾಪಕ್ಕೆ ಮುಕ್ತಿಸಿಕ್ಕಿತು. ನಾನು ಮತ್ತೆ ಶಮಣ ದ್ವೀಪಕ್ಕೆ ಹೋಗುತ್ತೇನೆ" ಎಂದು ರಿವ್ವನೆ ಆಕಾಶ ಮಾರ್ಗದಲ್ಲಿ ಹೊರಟು ಹೋಯಿತು.

ಅಸ್ಥಿಪಂಜರವು ಆ ವಿಧವಾಗಿ ಹೇಳುತ್ತ ಆಕಾಶ ಮಾರ್ಗದಲ್ಲಿ ಹಾರಿಹೋದುದನ್ನು ನೋಡಿ ಅಲ್ಲಿದ್ದವರೆಲ್ಲಾ ಹೆದರಿ ತರಗೆಲೆಯಂತೆ ನಡುಗಿದರು. ಏಕಾಕ್ಷಿ ಎತ್ತಿದ್ದ ಕತ್ತಿಯನ್ನು ಹಾಗೇ ಹಿಡಿದುಕೊಂಡು, ಹಾರಿಹೋಗುತ್ತಿರುವ ಗುರುದ್ರೋಹಿಯ ಅಸ್ಥಿಪಂಜರವು ಮರೆಯಾಗುವವರೆಗೂ ನೋಡುತ್ತ ನಿಂತನು. ಸಮರಸೇನನು ಚತುರ್ನೇತ್ರನನ್ನು ಸಮೀಪಿಸಿ ಶಾಕ್ತೇಯನ ತ್ರಿಶೂಲವನ್ನು ಅವನ ಕೈಗೆ ಒಪ್ಪಿಸಿದನು.

ಅಸ್ಥಿಪಂಜರವು ಮಾಯವಾದ ಮೇಲೆ ಏಕಾಕ್ಷಿ ತನ್ನ ದೃಷ್ಟಿಯನ್ನು ಚತುರ್ನೇತ್ರನ ಕಡೆಗೆ ಇಳಿಸಿದನು. ಆಗ ಚತುರ್ನೇತ್ರನ ಕೈಯಲ್ಲಿ ಥಳಥಳಿಸುವ

ಶಾಕ್ತೇಯನ ತ್ರಿಶೂಲವನ್ನು ನೋಡಿ, ತಲೆಯ ಮೇಲೆ ಸಿಡಿಲು ಬಡೆದವನಂತೆ "ಸತ್ತೆನಲ್ಲೋ! ಕಪಾಲಾ! ಕಾಲಭುಜಂಗಾ!" ಎಂದು ಕೆಟ್ಟದನಿಯಿಂದ ಕೂಗಿ ಓಡಿ ಹೋಗಲು ತೊಡಗಿದನು.

"ಚತುರ್ನೇತ್ರಾ! ಆ ಪಾಪಿಯನ್ನು ಜೀವ ದೊಂದಿಗೆ ಓಡಲು ಬಿಡಬಾರದು" ಎಂದನು ಸಮರಸೇನ. ಅವನ ಮಾತಿಗೆ ಚತುರ್ನೇತ್ರನು ನಕ್ಕು, "ಸಮರಸೇನಾ! ಏಕಾಕ್ಷಿ ಎಲ್ಲಿಗೂ ಓಡಿ ಹೋಗ ಲಾರನು. ಯಾವಾಗ ಯಾವ ಕ್ಷಣದಲ್ಲಿ ಬೇಕಾದರೂ, ಅವನು ಎಲ್ಲಿ ಅಡಗಿಕೊಂಡಿದ್ದರೂ ಕೂಡಾ ಈ ತ್ರಿಶೂಲವು ಅವನನ್ನು ನಾಶಮಾಡಿ ಬಿಡಬಲ್ಲುದು. ಇದೋ ನೋಡು" ಎಂದು ತ್ರಿಶೂಲವನ್ನು ಏಕಾಕ್ಷಿಯ ಕಡೆಗೆ ಬಿಸುಡುತ್ತ "ಆ ಗುರುದ್ರೋಹಿಯ ತಮ್ಮನಾದ ಈ ಏಕಾಕ್ಷಿಯನ್ನು ಕೊಂದು ಬಾ" ಎಂದನು. ಶಾಕ್ತೇಯನ ತ್ರಿಶೂಲವು ಮಿಂಚಿನ ವೇಗದಲ್ಲಿ ಆಕಾಶ ಮಾರ್ಗವಾಗಿ ಹಾರಿಹೋಗಿ, ಓಡುತ್ತಿರುವ ಏಕಾಕ್ಷಿ ಮಾಂತ್ರಿಕನನ್ನು ದಾಟಿಕೊಂಡು ಮುಂದೆ ಹೋಯಿತು. ಬಳಿಕ ಇಮ್ಮಡಿ ವೇಗದಲ್ಲಿ ಹಿಂದಿರುಗಿ ಏಕಾಕ್ಷಿಯ ಗುಂಡಿಗೆಯನ್ನು ಭೇದಿಸಿತು. "ಹಾ!" ಎಂದು ಆರ್ತನಾದ ಮಾಡುತ್ತಾ ಏಕಾಕ್ಷಿ ನೆಲಕ್ಕೆ ಬಿದ್ದನು. ತ್ರಿಶೂಲವು ಮತ್ತೆ ಚತುರ್ನೇತ್ರನ ಬಳಿಗೇ ಬಂದು ಅವನ ಕೈ ಸೇರಿತು.

"ಚತುರ್ನೇತ್ರಾ, ಇನ್ನು ಕಪಾಲ ಮತ್ತು ಕಾಲ ಭುಜಂಗಗಳನ್ನೂ ಕೊನೆಗಾಣಿಸಬೇಕು" ಎಂದು ಸಮರಸೇನನು ಜ್ಞಾಪಕಪಡಿಸಿದನು.

"ಅವುಗಳಿಂದ ಇನ್ನೇನೂ ಆಗದು. ಏಕಾಕ್ಷಿ ಬಿದ್ದ ಮೇಲೆ ಕಪಾಲವು ಕೇವಲ ತಲೆಬುರುಡೆಯೇ. ಕಾಲಭುಜಂಗವು ಮಾಮೂಲು ಹಾವಿನಂತೆ ಅಕೋ ಅತ್ತ ಓಡಿ ಹೋಯಿತು!" ಎಂದನು ಚತುರ್ನೇತ್ರ.

ಆಮೇಲೆ ಚತುರ್ನೇತ್ರನು, "ಇನ್ನು ಸ್ವಲ್ಪವೂ ತಡಮಾಡಬಾರದು. ಪೂರ್ವ ತೀರಕ್ಕೆ ಹೋಗಿ ಧನ



ರಾಶಿಯ ಆ ನಾವೆಯನ್ನು ವಶಪಡಿಸಿಕೊಳ್ಳುವ ಸಮಯ ಸನ್ನಿಹಿತವಾಯಿತು. ನಡೆಯಿರೆಲ್ಲಾ" ಎಂದನು ಚತುರ್ನೇತ್ರ.

ಎಲ್ಲರೂ ಅರಣ್ಯದ ದಾರಿಯ ಮೂಲಕ, ಗುಡ್ಡ ಕಣಿವೆಗಳಲ್ಲಿ ನಡೆದು ಮಾರಣೇದಿನ ಸಾಯಂಕಾಲದ ಹೊತ್ತಿಗೆ ಪೂರ್ವ ಸಮುದ್ರ ತೀರವನ್ನು ಸೇರಿದರು. ಅಲ್ಲಿಯ ಸಮುದ್ರದಲ್ಲಿ ಧನರಾಶಿಗಳಿಂದ ತುಂಬಿದ ನಾವೆಯೂ ಅದನ್ನು ಕಾಯುತ್ತಿದ್ದ ನಾಗಕನ್ಯೆಯೂ ಸಮುದ್ರದಲ್ಲಿ ತೇಲಿಕೊಂಡಿರುವುದು ಕಾಣಿಸಿತು.

ಚತುರ್ನೇತ್ರನು ತನ್ನ ಕೈಯಲ್ಲಿದ್ದ ಶಾಕ್ತೇಯನ ಅಪೂರ್ವ ಶಕ್ತಿಯ ತ್ರಿಶೂಲವನ್ನು ಮಂತ್ರಿಸಿ ಆ ನಾವೆಯ ಕಡೆಗೆ ಬೀಸಿ ಒಗೆದನು. ತ್ರಿಶೂಲವು ಮಹಾವೇಗದಿಂದ ರೊಯ್ಯನೆ ಹೋಗಿ ಆ ನಾವೆ ಯನ್ನು ತಾಗಿತು. ಮರುಕ್ಷಣದಲ್ಲಿ ನಾಗಕನ್ಯೆ ನಾವೆಯ ಚುಕ್ಕಾಣಿಯನ್ನು ಹಿಡಿದು ಅದನ್ನು ತೀರಕ್ಕೆ ತಂದು ಸೇರಿಸಿ ತಾನು ಕೆಳಗಿಳಿದು ತಲೆ ತಗ್ಗಿಸಿ ನಿಂತಳು.

ಅವಳನ್ನು ನೋಡಿ ಚತುರ್ನೇತ್ರನು "ನಾನು ಶವಣ ದ್ವೀಪದ ರಾಜನಾದ ಶಾಕ್ತೇಯನ ಶಿಷ್ಯ. ನನ್ನ ಹೆಸರು ಚತುರ್ನೇತ್ರ. ಇದು ಮಂತ್ರ ಶಕ್ತಿಯುಳ್ಳ ಆ ಗುರುವಿನ ತ್ರಿಶೂಲ. ಗುರುವಿನ ಆಜ್ಞೆ ಗೊತ್ತಿದೆ ತಾನೇ ? ಆ ಪ್ರಕಾರ ನೀನು ನನ್ನ ಹೆಂಡತಿ" ಎಂದನು.

ಆ ಮಾತನ್ನು ಕೇಳಿ ನಾಗಕನ್ಯೆ ಮುಗುಳು ನಗುತ್ತಾ ಚತುರ್ನೇತ್ರನಿಗೆ ನಮಸ್ಕಾರ ಮಾಡಿದಳು. ಸಮರಸೇನನೂ ಸೈನಿಕರೂ ಉತ್ಸಾಹದಿಂದ ಜಯಜಯಾಕಾರ ಮಾಡಿದರು.

ಚತುರ್ನೇತ್ರನು ಸಮರಸೇನನ ಕಡೆಗೆ ತಿರುಗಿ, "ಸಮರಸೇನಾ, ಈ ದಿನದಿಂದ ನಾನು ಅರ್ಧಾಂಗಿಯನ್ನು ಪಡೆದು ಪೂರ್ಣಾಂಗನಾದೆನು. ನಾನೂ ಈ ನಾಗಕನ್ಯೆಯೂ ಗಂಡಹೆಂಡಿರಾಗುತ್ತೇವೆ. ಇನ್ನು ನಾವಿಬ್ಬರೂ ಈ ಮಂತ್ರದ್ವೀಪದಲ್ಲಿ ಪ್ರಶಾಂತವಾಗಿ ಕಾಲಕಳೆಯಲಿದ್ದೇವೆ. ನೀನು ಯಾವ ಕಾರ್ಯಕ್ಕಾಗಿ ಬಂದೆಯೋ ಆ ಕೆಲಸ, ಧೂಮಕೇತು ದರ್ಶನದಿಂದ ಅಡಿಗಡಿಗೂ ಗಂಡಾಂತರಕಾರಿಯಾದರೂ, ಕುಂಡಲಿನೀ ದೇವಿಯ ಕೃಪೆಯಿಂದ ಜಯಪ್ರದವಾಗಿ ಮುಗಿಯಿತು. ನಾವೆಯೊಳಗಿನ ಅಪಾರ ಧನರಾಶಿಯೊಂದಿಗೆ ನೀನು ನಿನ್ನ ಕುಂಡಲಿನೀದ್ವೀಪಕ್ಕೆ ಹೋಗಬಹುದು. ನಿನ್ನ ಹಡಗುಗಳೂ ಪರಿವಾರದವರೂ ನಿನ್ನ ದಾರೀಕಾಯುತ್ತಿದ್ದಾರೆ" ಎಂದನು.

ಸಮರಸೇನನು ತನ್ನ ಪ್ರಯಾಣದ ಸನ್ನದ್ಧತೆಗಳನ್ನು ಬೇಗಬೇಗನೆ ಮಾಡಿದನು. ಚತುರ್ನೇತ್ರನಿಗೆ ಅವನು ತನ್ನ ಹೃತ್ಪೂರ್ವಕವಾದ ಕೃತಜ್ಞತೆ ತಿಳಿಸಿನು. ಚತುರ್ನೇತ್ರನು ಅವನನ್ನು ಆಶೀರ್ವಾದ ಮಾಡಿ, ತನ್ನ ಪತ್ನಿಯಾದ ನಾಗಕನ್ಯೆಯ ಕೈ ಹಿಡಿದುಕೊಂಡು ಅರಣ್ಯದ ಕಡೆಗೆ ಹೊರಟುಹೋದನು.

ಭೂಕಂಪನಗಳಿಂದಲೂ ಭಯಂಕರ ವ್ಯಾಗಗಳಿಂದಲೂ ತುಂಬಿಕೊಂಡಿರುವ ಆ ಮಂತ್ರದ್ವೀಪವು ತನ್ನಂಥವರಿಗೆ ಯೋಗ್ಯವಲ್ಲವೆಂದು ಶಿವದತ್ತನು ನಿಶ್ಚಯಿಸಿ, ತನ್ನ ಅನುಚರರೊಂದಿಗೆ ಸಮರಸೇನನ ಜತೆಯಲ್ಲಿ ಕುಂಡಲಿನೀ ದ್ವೀಪಕ್ಕೇ ಹೊರಟನು. ಪ್ರಶಾಂತವಾಗಿರುವ ಸಾಗರದಲ್ಲಿ ಒಂದು ತಿಂಗಳು ಪ್ರಯಾಣಮಾಡಿದ ಮೇಲೆ ಒಂದುದಿನ ಬೆಳಗ್ಗಿನ ಹೊತ್ತಿನಲ್ಲಿ ಎಲ್ಲರೂ ಕ್ಷೇಮವಾಗಿ ಕುಂಡಲಿನೀ ದ್ವೀಪ ರಾಜ್ಯವನ್ನು ಸೇರಿದರು.

ಬಹಳಕಾಲ ಪತ್ತೆಯಿಲ್ಲದೆ ಹೋದ ಸಮರಸೇನನೂ ಸೈನಿಕರೂ ಅಪಾರ ಧನದೊಂದಿಗೆ ತಿರುಗಿ ಬಂದುದನ್ನು ನೋಡಿ, ಚಿತ್ರಸೇನರಾಜನೂ ಪ್ರಜೆಗಳೂ ಅವರನ್ನು ಘನವಾದ ಸ್ವಾಗತೋತ್ಸವ ಪೂರ್ವಕವಾಗಿ ಬರಮಾಡಿಕೊಂಡರು. ಕುಂಡಲಿನೀ ದ್ವೀಪವು ವೈಭವದಿಂದ ಮೆರೆಯಿತು. (ಮುಗಿಯಿತು)

